

# ಬೊಮ್ಮಗೊಂಡೇಶ್ವರ - ಒಂದು ಅಧ್ಯಯನ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



*ಸಂಶೋಧಕರು*

ಸುನಿತಾ ಬಾಬುರಾವ



*ಮಾರ್ಗದರ್ಶಕರು*

ಡಾ|| ಜಗನ್ನಾಥ ಹೆಬ್ಬಾಳೆ

ನಿರ್ದೇಶಕರು

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ





ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - 583 276

ಡಿಸೆಂಬರ್ - 2005



# ಬೊಮ್ಮಗೊಂಡೇಶ್ವರ-ಒಂದು ಅಧ್ಯಯನ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ,
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

**ಸುನಿತಾ ಬಾಬುರಾವ**

ಮಾರ್ಗದರ್ಶಕರು

**ಡಾ. ಜಗನ್ನಾಥ ಹೆಬ್ಬಾಳೆ**

ನಿರ್ದೇಶಕರು,
ಕ.ರಾ.ಶಿ.ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ









ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಡಿಸೆಂಬರ್ ೨೦೦೫

# ಪ್ರಮಾಣ ಪತ್ರ

ಬೊಮ್ಮಗೊಂಡೇಶ್ವರ ಅಧ್ಯಯನ ಎಂಬ ನಿಬಂಧವನ್ನು ಡಾ. ಜಗನ್ನಾಥ ಹೆಬ್ಬಾಳೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೀದರ
ದಿನಾಂಕ : 15-12-2005

**ಸುನಿತಾ ಬಾಬುರಾವ**
ಎಂ.ಫಿಲ್. ವಿದ್ಯಾರ್ಥಿನಿ
ಕ.ರಾ.ಶಿ.ಸಂಸ್ಥೆಯ
ಸ್ನಾತಕೋತರ ಕನ್ನಡ ಸಂಶೋಧನ ಕೇಂದ್ರ ಬೀದರ

# ಮಾರ್ಗದರ್ಶಕರ ಪ್ರಮಾಣ ಪತ್ರ

ಬೊಮ್ಮಗೊಂಡೇಶ್ವರ–ಒಂದು ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸುನಿತಾ ಬಾಬುರಾವ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಬೀದರ
ದಿನಾಂಕ : ೧೫–೧೨–೨೦೦೫

ಡಾ.ಜಗನ್ನಾಥ ಹೆಬ್ಬಾಳೆ
ನಿರ್ದೇಶಕರು,
ಕ.ರಾ.ಶಿ.ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ

# ಪರಿವಿಡಿ

# ೧. ಅಧ್ಯಯನದ ಉದ್ದೇಶ

ಜನಪದ ಸಂಸ್ಕೃತಿಯ ಸಂಪತ್ತು ಅಪಾರವಾದದ್ದು. ''ಜನಪದ ಸಾಹಿತ್ಯ ಶಿಷ್ಟ ಸಾಹಿತ್ಯಕ್ಕೆ ಹಾಲೆರೆದು ಪೋಷಿಸಿಕೊಂಡು ಬಂದ ಕಾಮಧೇನು'' ಎನ್ನುತ್ತಾರೆ ಜೀ.ಶಂ. ಪರಮಶಿವಯ್ಯ. ತನ್ನದೇ ಆದ ಮೌಲ್ಯಗಳನ್ನು ಇಟ್ಟುಕೊಂಡು ಜನಪದ ಸಂಸ್ಕೃತಿ ಇಂದು ವಿಶ್ವದ ವಿದ್ವಾಂಸರ ಗಮನ ಸೆಳೆಯುತ್ತಿದೆ. ಜೊತೆಗೆ ಅಂತರಶಿಸ್ತಿಯ ಅಧ್ಯಯನ ಹಾಗೂ ಹೊಸ ಹೊಸ ಸಿದ್ಧಾಂತಗಳನ್ನು ರೂಪುಗೊಳ್ಳುವುದಕ್ಕೆ ಕಾರಣವಾಗಿದೆ.

ಶ್ರೀಮಂತ ಜನಪದ ಸಂಸ್ಕೃತಿಯನ್ನು ಅಥವಾ ಸಾಹಿತ್ಯವನ್ನು ಉಳಿಸಿಕೊಳ್ಳುವ ಹಿನ್ನಲೆಯಲ್ಲಿ ಅವುಗಳ ಅಧ್ಯಯನ ಹಾಗೂ ಸಂಶೋಧನೆ ಅನಿವಾರ್ಯ ಎನಿಸಿಕೊಳ್ಳುತ್ತವೆ. ಈ ಕಾರ್ಯ ಪ್ರಾದೇಶಿಕ ಮಟ್ಟದಲ್ಲಿ ಆಗುವುದೇ ಆದರೆ ಇನ್ನೂ ಒಳ್ಳೆಯದೆನಿಸುತ್ತದೆ. ಇದರಿಂದ ಪ್ರಾದೇಶಿಕತೆಗೆ ಹೆಚ್ಚು ಮಹತ್ವ ಕೊಟ್ಟಂತಾಗುತ್ತದೆ. ಏಕೆಂದರೆ ಪ್ರಾದೇಶಿಕತೆಯನ್ನು ಜಾಗತಿಕ ಮಟ್ಟಕ್ಕೆ ಕರೆದೊಯ್ಯಬೇಕೆ ವಿನಃ ನಮ್ಮದಲ್ಲದ ತದ್ವಿರುದ್ಧ ಸಂಸ್ಕೃತಿಯನ್ನು ಪ್ರಾದೇಶಿಕತೆಗೆ ಇಳಿಸುವುದು ಒಂದರ್ಥದಲ್ಲಿ ಸಂಸ್ಕೃತಿಯ ನಾಶವೇ ಆಗಿದೆ.

ಪ್ರಾದೇಶಿಕತೆಗೆ ಹೆಚ್ಚಿನ ಮಹತ್ವ ಕೊಡುತ್ತ ನಾನು 'ಬೊಮ್ಮಗೊಂಡೇಶ್ವರ ಃ ಒಂದು ಅಧ್ಯಯನ' ಎಂಬ ವಿಷಯವನ್ನು ಆರಿಸಿಕೊಂಡಿದ್ದೇನೆ. ಈ ಅಧ್ಯಯನ ದೇಸಿಯಿತೆಯಲ್ಲಿ ದೇಸಿಯತೆಯನ್ನು ಹುಡುಕುವ ಕಾರ್ಯವಾಗಿದೆ. ಕಾರಣವಿಷ್ಟೇ ನನ್ನ ಅಧ್ಯಯನದ ವಿಷಯ ಬೀದರ ಜಿಲ್ಲೆಗೆ ಮಾತ್ರ ಸೀಮಿತಗೊಂಡಿದೆ. ಅದರಲ್ಲಿಯೂ ಬೀದರ ಸುತ್ತಲೂ ಈ ವಿಷಯ ಪಸರಿಸಿಕೊಂಡಿದೆ. ಜೊತೆಗೆ ಸ್ಥಳೀಯ ಐತಿಹಾಸಿಕ ವ್ಯಕ್ತಿಯ ಅಧ್ಯಯನ ಇದಾಗಿದೆ.

ಈ ಅಧ್ಯಯನದ ಮುಖ್ಯ ಉದ್ದೇಶವೆಂದರೆ ಬೊಮ್ಮಗೊಂಡೇಶ್ವರ ಕುರಿತಂತೆ ಅಲ್ಲಲ್ಲಿ ಕೆಲವು ದೇವಾಲಯಗಳು, ಅನೇಕ ಮೂರ್ತಿಗಳು ಕಾಣಸಿಗುತ್ತವೆ. ಜೊತೆಗೆ ಬೀದರ ಕೋಟೆ ಒಳಗೆ ಈತನ ಹೆಸರಿನ ಒಂದು ಕೆರೆ ಇದೆ. ಇವುಗಳ ಹಿಂದೆ ಹುದುಗಿಕೊಂಡ ಬೊಮ್ಮಗೊಂಡೇಶ್ವರನ ಒಟ್ಟು ಪರಿಚಯ ಕೊಡುವುದರ ಜೊತೆಗೆ ಹುದುಗಿಕೊಂಡಂತ ಈತನ ಬಹುಮುಖ ವ್ಯಕ್ತಿತ್ವವನ್ನು ಆಧಾರಸಹಿತ ಸಾಬೀತು ಪಡಿಸುವುದೇ ಆಗಿರುತ್ತದೆ.

ನಾನು ಚಿಕ್ಕವಳಿರುವಾಗಿನಿಂದ ಬೊಮ್ಮಗೊಂಡೇಶ್ವರನ ಕುರಿತಂತೆ ಕಥೆಗಳನ್ನು ಕೇಳುತ್ತ ಬಂದವಳು. ಅಲ್ಲಲ್ಲಿ ಕಾಣುವ ಈತನ ಮೂರ್ತಿಗಳು, ದೇವಾಲಯಗಳು ನನ್ನಲ್ಲಿ ಇನ್ನಷ್ಟು ಕುತುಹಲವನ್ನು ಕೆರಳಿಸಿದವು. ನನ್ನ ತಾಯಿಯನ್ನೊಳಗೊಂಡಂತೆ ಅನೇಕ ಹಿರಿಯರೊಡನೆ ಈ ಕುರಿತು ಚರ್ಚೆ ಮಾಡಿದಾಗ ಅನೇಕ ವಿಷಯಗಳನ್ನು ಕಂಡುಕೊಳ್ಳಲು ಸಾಧ್ಯವಾಯಿತು.

ಬೊಮ್ಮಗೊಂಡೇಶ್ವರನೆಂಬ ವ್ಯಕ್ತಿ ಬೀದರ ತಾಲೂಕಿನ ಕೆಲವು ಗ್ರಾಮಗಳನ್ನೊಳಗೊಂಡು ಇಲ್ಲಿನ ಜನಪದರ ಮೇಲೆ ಬೀರಿದ ಪ್ರಭಾವ ಅಪಾರ. ಜೊತೆಗೆ ಈತನ ಕುರಿತಂತೆ ಐತಿಹ್ಯಗಳು ಜನಪದ ಕಥೆಗಳು, ಪವಾಡಗಳು, ಹಾಡುಗಳು, ವಚನಗಳು ಮುಂತಾದವುಗಳನ್ನು ಅಧ್ಯಯನಕ್ಕೊಳಪಡಿಸಿದ್ದೇನೆ.

ನಾನು ಆರಿಸಿಕೊಂಡ ಈ ವಿಷಯ ಹಿಂದೆ ಆಗಿ ಹೋದಂತಹ (ಸುಮಾರು ೧೫ನೇ ಶತಮಾನದಲ್ಲಿ) ಒಬ್ಬ ಸಾಮಾನ್ಯ ಆದರೆ ಜನಪದರ ದೃಷ್ಟಿಯಲ್ಲಿ ಅಸಾಮಾನ್ಯ ವ್ಯಕ್ತಿಯ ಅಧ್ಯಯನವಾದರೂ, ಇವನು ಜನಪದರ ಮನಸ್ಸಿನ ಮೇಲೆ ಮಾಡಿದ ಪ್ರಭಾವ ವಿಶೇಷವಾದದ್ದು. ಅಷ್ಟೇ ಅಲ್ಲ. ಆರಾಧ್ಯ ದೈವಕ್ಕೂ ಏರಿ ನಿಂತದ್ದೂ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಈ ನನ್ನ ಅಧ್ಯಯನ ಇವು ಎಲ್ಲವುಗಳನ್ನು ಹುಡುಕಿಕೊಂಡು ಹೋಗುತ್ತದೆ.

ಗೊಂಡರು ಹೆಚ್ಚಾಗಿ ಬೀರಗೊಂಡ, ಮಾಳಗೊಂಡ, ಮೈಲಾರ ಮಲ್ಲಣ್ಣ ಮುಂತಾದ ಮನೆ ದೈವಗಳಿಗೆ ಪೂಜೆ ಮಾಡುತ್ತಾರೆ. ಸತ್ಯ ಶರಣ ಶಾಂತ ಮುತ್ತಯ್ಯ, ಅಮೋಘಸಿದ್ಧ, ಜಟ್ಟಿಂಗರಾಯ, ಮುದ್ದಗೊಂಡ, ಮುದ್ದವ್ವ, ಮಾಯವ್ವ ಮುಂತಾದವರ ಬಗ್ಗೆ ಅನೇಕ ಹಾಡುಗಳು, ಕಥೆಗಳು ಹೈದ್ರಾಬಾದ ಕರ್ನಾಟಕ ಭಾಗಗಳಲ್ಲಿ ದೊರೆಯುತ್ತವೆ. ಈ ಎಲ್ಲರ ಸಾಲಿನಲ್ಲಿ ಬೀದರ ಜಿಲ್ಲೆಯಲ್ಲಿ ಬೊಮ್ಮಗೊಂಡೇಶ್ವರ ಕೂಡ ಒಬ್ಬ ದೈವಿ ಪುರುಷನಾಗಿ ಕೆಲವು ಶತಮಾನಗಳಿಂದ ಪೂಜಾಗೊಳ್ಳಲ್ಪಡುತ್ತಿದ್ದಾನೆ. ಇಲ್ಲಿಯ ಗೊಂಡ ಜನಾಂಗದವರಿಗೆ ಇವನೊಬ್ಬ ಹೆಮ್ಮೆಯ ಪ್ರತಿರೂಪನಾಗಿ ಕಾಣಿಸುತ್ತಾನೆ. ಅನೇಕ ಹಳ್ಳಿಗಳಲ್ಲಿ ಬಸವಣ್ಣ ಗಾಂಧೀ, ಅಂಬೇಡ್ಕರ ಮುಂತಾದವರ ಪ್ರತಿಮೆಗಳು ಸ್ಥಾಪಿತಗೊಂಡಂತೆ, ಬೊಮ್ಮಗೊಂಡೇಶ್ವರನ ಪ್ರತಿಮೆ ಕೂಡ ನಾಲ್ಕು ಬೀದಿಗಳು ಸೇರುವ ಸ್ಥಳದಲ್ಲಿ ಸ್ಥಾಪಿಸಿದ್ದನ್ನು ಕಾಣಬಹುದಾಗಿದೆ.

ಬೀರಗೊಂಡ, ಮಾಳಗೊಂಡ, ಮೈಲಾರ ಮಲ್ಲಣ್ಣರಂತೆ ಈ ಬೊಮ್ಮಗೊಂಡೇಶ್ವರ ಕೂಡ ಇಲ್ಲಿನ ಗೊಂಡರ ಆರಾಧ್ಯ ದೈವವಾಗಿದ್ದೂ ೧೪-೧೫ನೇ ಶತಮಾನದಲ್ಲಿ ಬದುಕಿ ಬಾಳಿದ ವ್ಯಕ್ತಿಯೇ ಆಗಿದ್ದಾರೆ. ಅಸಾಮಾನ್ಯ ವ್ಯಕ್ತಿತ್ವ ಉಳ್ಳಂಥ ಇವರು ಯಾವುದೇ ಊರಿಗೆ ಸಂಬಂಧ ಪಟ್ಟವರಾಗಿರದೆ ಇಡೀ ಜನಪದ ಹಾಗೂ ಗೊಂಡ ಬುಡಕಟ್ಟಿಗೆ ಸಂಬಂಧಿಸಿದವರಾಗಿದ್ದಾರೆ. ಬೊಮ್ಮಗೊಂಡೇಶ್ವರ ಇತ್ತೀಚಿನ ದಿನಗಳಲ್ಲಿ ಬೀದರ ಜಿಲ್ಲೆಯ ಗೊಂಡ ಬುಡಕಟ್ಟಿನ ಆರಾಧ್ಯ ದೇವರಾಗಿ ಪೂಜೆಗೊಳ್ಳಲ್ಪಡುತ್ತಿದ್ದಾನೆ. ಮುಖ್ಯವಾಗಿ ಬೀದರ ತಾಲೂಕಿನ ಕೆಲವು ಗ್ರಾಮಗಳಲ್ಲಿ ಜೊತೆಗೆ ಬೀದರ ಜಿಲ್ಲೆಗೆ ಹತ್ತಿಕೊಂಡಂತೆ ಆಂಧ್ರ ಹಾಗೂ ಮಹಾರಾಷ್ಟ್ರದ ಕೆಲವು ಗ್ರಾಮಗಳಲ್ಲಿ ಹೆಚ್ಚು ಪ್ರಚಲಿತದಲ್ಲಿದ್ದುದು ಕಂಡು ಬರುತ್ತದೆ. ಇವು ಎಲ್ಲವುಗಳಿಗೆ ಕಾರಣಗಳನ್ನು ಹುಡುಕಿಕೊಂಡು ಹೋದಂತೆ ನನಗೆ ಅನೇಕ ಅಂಶಗಳು ಎದುರುಗೊಂಡಿವೆ. ಅವು ಎಲ್ಲವುಗಳನ್ನು ಸಮೀಕರಿಸಿದ್ದೇನೆ.

ಜನಪದರ ದೃಷ್ಟಿಯಲ್ಲಿ ಬೊಮ್ಮಗೊಂಡೇಶ್ವರ ಒಬ್ಬ ವೀರನಾಗಿ, ನಾಯಕನಾಗಿ, ಮಾನವತಾವಾದಿಯಾಗಿ, ಪವಾಡ ಪುರುಷನಾಗಿ, ಧರ್ಮವಂತನಾಗಿ ಕಾಣಿಸಿಕೊಂಡಿದ್ದರಲ್ಲಿ ಎರಡು ಮಾತಿಲ್ಲ. ವ್ಯಕ್ತಿಯೊಬ್ಬನನ್ನು ದೈವೀಕರಿಸುವುದರ ಹಿನೆಲೆ ಹಾಗೂ ಅದಕ್ಕೆ ಶಕ್ತಿಯಾಗಿ ಕಾರ್ಯ ನಿರ್ವಹಿಸಿದ ಆತನ ವ್ಯಕ್ತಿತ್ವ ಎರಡನ್ನೂ ಸಂಶೋಧನೆಗೆ ಅಳವಡಿಸಿಕೊಂಡಾಗ ಹೊಸದಾದ ಕೆಲವು ಅಂಶಗಳು ಗೋಚರಿಸಿದವು.

ಈಗಾಗಲೇ ಹೇಳಿರುವಂತೆ ನನ್ನ ಹುಡುಕಾಟ ದೇಸಿಯತೆಯಲ್ಲಿ ದೇಸಿಯದು. ಇದೊಂದು ವ್ಯಷ್ಟಿಶೋಧ, ದೇಸಿ ಸಂಸ್ಕೃತಿಯ ಅಳಿವು ಉಳಿವಿನ ಈ ಪರ್ವಕಾಲದಲ್ಲಿ ಪ್ರತಿಯೊಂದನ್ನು ತೆಕ್ಕೆಗೆ

ತೆಗೆದುಕೊಳ್ಳಬೇಕಾಗುತ್ತದೆ. ಸ್ಥಳೀಯರ ಸ್ಥಳೀಯವಾದ ಆಲೋಚನೆ, ಅವರ ಹೆಜ್ಜೆಗಳು, ಆಚಾರ-ವಿಚಾರಗಳು ಒಟ್ಟಿನಲ್ಲಿ ವ್ಯಷ್ಠಿ ಮತ್ತು ಸಮಷ್ಠಿ ಎರಡನ್ನ ಸಮ ತೂಕಕ್ಕೆ ನಿಲ್ಲಿಸಿ ನೋಡಬೇಕು. ನಮ್ಮ ಅಧ್ಯಯನ ವ್ಯಾಪ್ತಿಯಲ್ಲಿ ಕೇವಲ ಒಂದು ಜನಾಂಗ, ಒಂದು ಸಂಸ್ಕೃತಿ, ಒಂದು ಮನೆತನ, ಒಂದು ಊರು ಅಷ್ಟೇ ಅಲ್ಲ ಒಬ್ಬ ವ್ಯಕ್ತಿಗೆ ಸೀಮಿತವಾದರೂ ಅಡ್ಡಿಯಿಲ್ಲ. ಎಲ್ಲ ಸ್ತರದ ವೈಶಿಷ್ಟ್ಯತೆಗಳನ್ನು ಕೂಲಂಕೂಷವಾಗಿ ಪರಿಶೀಲಿಸಬೇಕಾಗುತ್ತದೆ. ಇಂಥ ವ್ಯಷ್ಠಿ ಶೋಧವೇ ಕೆಲವು ಸಲ ಸಮಷ್ಠಿ ಶೋಧಕ್ಕೆ ಕಾರಣವು ಆಗಬಹುದು ಆ ಒಂದು ಉದ್ದೇಶದಿಂದಲೇ 'ಬೊಮ್ಮಗೊಂಡೇಶ್ವರ : ಒಂದು ಅಧ್ಯಯನ' ಎಂಬ ವಿಷಯವನ್ನು ಆರಿಸಿಕೊಂಡಿದ್ದೇನೆ. ''ವ್ಯಷ್ಠಿಯ ಶೋಧಕ್ಕೆ, ಪರಿಗಣನೆಗೆ, ವಿಶ್ಲೇಷಣೆಗೆ ಅಗತ್ಯ ವೇದಿಕೆ ಕಲ್ಪಿಸಿಕೊಡುವುದು ಸ್ಥಳೀಯತೆಯನ್ನು ಕುರಿತ ಅಧ್ಯಯನದ ಉದ್ದೇಶ. ಮನುಷ್ಯನ ಮೂಲ ಸ್ಥಿತಿ, ಸ್ವರೂಪ, ಸ್ವಭಾವ, ವಿಚಾರ, ಆಸೆ-ಆಕಾಂಕ್ಷೆ, ಇತಿ-ಮಿತಿ ಇತ್ಯಾದಿಯನ್ನು ನಿಖರವಾಗಿ ಬಿಂಬಿಸುವ ಪ್ರಯತ್ನ ಇದರದು. ಎಲ್ಲವನ್ನು ಒಳಗೊಳ್ಳುವಂಥಾದರಿಂದ, ಇದು ಜಗತ್ತಿನ ಎಲ್ಲದರ ಅಸ್ತಿತ್ವದ ನೆಲೆಗಳನ್ನು ಸೂಕ್ಷ್ಮವಾಗಿ ನಿರ್ಧರಿಸಿಕೊಡಬಯಸುತ್ತದೆ. ಸೃಷ್ಟಿಯ ಪರಿಪೂರ್ಣ ದರ್ಶನ ಮಾಡಿ ಕೊಡಲೆತ್ನಿಸುತ್ತದೆ. ಈ ದೃಷ್ಟಿಯಿಂದ, ಸ್ಥಳೀಯ ಚರಿತ್ರೆ ಅಧ್ಯಯನಗಳು/ಚರ್ಚೆಗಳು ಹೆಚ್ಚು ಅರ್ಥಪೂರ್ಣ ಹಾಗೂ ಉಪಯುಕ್ತ'' ಎಂದಿರುವ ಪ್ರೊ. ಲಕ್ಷ್ಮಣ ತೆಲಗಾವಿಯವರ ಮಾತು ದೇಸಿಯತೆಗೆ ಹೆಚ್ಚು ಒತ್ತುಕೊಡುತ್ತದೆ. ('ಸ್ಥಳೀಯ ಚರಿತ್ರೆ : ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ'ಕ್ಕೆ ಬರೆದ ಸಂಪಾದಕೀಯ ನುಡಿ). ಹಿಂದಿಗಿಂತಲೂ ಇಂದು ಸ್ಥಳೀಯ ಸಂಸ್ಕೃತಿಯ ಮಹತ್ವವನ್ನು ಮನದಟ್ಟು ಮಾಡಿಕೊಳ್ಳಬೇಕು. ಆಧುನೀಕರಣಕ್ಕೆ ಬಲಿಯಾಗುತ್ತಿರುವ ಸ್ಥಳೀಯ ಸಂಸ್ಕೃತಿಯನ್ನು ಎಷ್ಟರ ಮಟ್ಟಿಗೆ ಉಳಿಸಿಕೊಳ್ಳಬಲ್ಲೆವು ಎನ್ನುವುದೇ ಇಂದು ಸವಾಲಾಗಿದೆ. ಸಾಂಸ್ಕೃತಿಕ ವೈವಿಧ್ಯತೆಯನ್ನು ಹಾಳುಗೆಡವಿ ಏಕ ಸಂಸ್ಕೃತಿಯನ್ನು ಪ್ರತಿಷ್ಠಾಪಿಸುವ ಹವಣಿಕೆ ನಮ್ಮ ಪರಿಸರದಲ್ಲಿ ನಿರ್ಮಾಣವಾಗುತ್ತಿದೆ. ಅಂಥದ್ದರಲ್ಲಿ ದೇಸಿ ಸಂಸ್ಕೃತಿ ಅಥವಾ ಸ್ಥಳೀಯ ಸಂಸ್ಕೃತಿಯನ್ನು ಉಳಿಸಲೇಬೇಕು.

ಈ ಸ್ಥಳೀಯ ವಿಷಯದ ಹುಡುಕಾಟದ ಸಂದರ್ಭದಲ್ಲಿ ಅನೇಕ ತೊಂದರೆಗಳು ಎದುರುಗೊಂಡಿವೆ. ಲಿಖಿತ ಹಾಗೂ ಮೌಖಿಕ ದಾಖಲೆಗಳ ಕೊರತೆ ವೃತ್ತಗಳ ಸಂಕೋಚ ಸ್ವಭಾವ ಹಾಗೂ ಅತಿಯಾದ ಅಭಿಮಾನ, ಒಂದು ವಿಷಯವನ್ನು ಇನ್ನೊಂದು ವಿಷಯದೊಡನೆ ತಿರುಚಿ ಮರುಚಾಗಿ ಹೇಳುವಿಕೆ ಹೀಗೆ ಹಲವಾರು ತೊಂದರೆಗಳುಂಟಾಗಿವೆ. ಸ್ಥಳೀಯ ವಿಷಯಕ್ಕೆ ''ಪ್ರಮುಖವಾಗಿ ಎದುರಾಗುವ ಸಮಸ್ಯೆ ಎಂದರೆ ದಾಖಲೆಗಳು ಲಭ್ಯವಾಗದಿರುವುದು ಹಾಗೂ ಲಭ್ಯವಾದಂತಹ ದಾಖಲೆಗಳು ಸಹ ಉತ್ಪ್ರೇಕ್ಷೆಯಿಂದಲೂ, ಅತಿ ಸರಳೀಕರಣದಿಂದಲೂ ರಚಿಸಿರುವಂತಹದಾಗಿರುತ್ತದೆ. ಈ ಸಮಯದಲ್ಲಿ ದೊರಕಿರುವ ದಾಖಲೆಗಳನ್ನು ಪರಿಶೀಲಿಸುವಾಗ ಸಂಶೋಧಕನು ಸೀಮಿತ ಪ್ರದೇಶದಲ್ಲಿ ಕಂಡು ಬರುವಂತಹ ಜಾತಿ, ಧರ್ಮ, ಮಠ, ದೇವಾಲಯ ಮುಂತಾದವುಗಳ ನಡುವೆ ನಿಷ್ಠುರವಾದ ಸತ್ಯ ಸಂಗತಿಯನ್ನು ಹೇಳುವಾಗ ಸಮಸ್ಯೆಗಳ ಬಲೆಯಲ್ಲಿ ಸಿಕ್ಕಿಕೊಳ್ಳುವುದು ಕಂಡು ಬರುತ್ತದೆ.''[೧] ಕೆಲವು ಸಲ ಲಿಖಿತ ದಾಖಲೆಗಳಿಲ್ಲದೇ

---

**ಅಡಿ ಟಿಪ್ಪಣಿ :**

೧. ಸ್ಥಳೀಯ ಚರಿತ್ರೆ : ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ, ಸಂ. ಲಕ್ಷ್ಮಣ ತೆಲಗಾವಿ, ಪು. ೫೮.

ಒದ್ದಾಡಬೇಕಾಗುತ್ತದೆ. ಈ ಎಲ್ಲ ಪ್ರಯತ್ನಗಳನ್ನು ಮೀರಿ ನನ್ನ ಈ ಕಿರು ಪ್ರಬಂಧವನ್ನು ಬರೆಯಲು ಪ್ರಯತ್ನ ಪಟ್ಟಿದ್ದೇನೆ. ಅಧ್ಯಯನದ ಉದ್ದೇಶ ಮಹತ್ವದ್ದಾಗಿದ್ದಂತೆ ಅದು ಕ್ರಮಿಸುವ ದಾರಿಯೂ ಮಹತ್ವದ್ದಾಗಿರಬೇಕಾಗುತ್ತದೆ.

ಇನ್ನೊಂದು ಮಹತ್ವದ ವಿಷಯವೆಂದರೆ ಇತಿಹಾಸದಲ್ಲಿ ನಡೆದು ಹೋದ ಸತ್ಯ ಘಟನೆಗಳ ಬಗ್ಗೆ ಯಾವುದೇ ಪುರಾವೆಗಳು ಸಿಗದೇ ಕತ್ತಲೆ ಕವಿದುಕೊಂಡಂಥ ಸಹಸ್ರ ಘಟನೆಗಳಿವೆ. ಈ ಘಟನೆಗಳಿಗೆ ಯಾವುದೇ ಗಟ್ಟಿ ಆಧಾರಗಳಿರದೇ ಕೇವಲ ಜನಪದರ ನಾಲಿಗೆಯ ಮೇಲೆ ಹಾಡಾಗಿ ಕಥೆಯಾಗಿ, ಐತಿಹ್ಯವಾಗಿ ಹೊರಹೊಮ್ಮುತ್ತವೆ. ಜನಪದರು ಹಿಂದೆ ಆದಂತಹ ಹಾಗೂ ಮರೆಯದಂಥ ಘಟನೆಯ ಸುತ್ತ ಕಥೆ ಕಟ್ಟಿಯೋ ಹಾಡು ಕಟ್ಟಿಯೋ, ತಲೆಮಾರಿನಿಂದ ತಲೆಮಾರಿಗೆ ರವಾನಿಸುತ್ತ ಬರುತ್ತಾರೆ. ಈ ಘಟನೆಗಳು ಸೃಷ್ಟಿಗೊಂಡಂತೆ ಕಂಡರೂ ಒಳಗಿನ ಒಳಪದರದಲ್ಲಿರುವ ಸತ್ಯ ಹೊರ ಬರಲು ಹವಣಿಸುತ್ತದೆ. ಇಂಥ ಸತ್ಯತೆ ಹಸ್ತ ಪ್ರತಿಯಂತಹ ಹಾಗೂ ಶಾಸನದಂತಹ ಯಾವುದೇ ಲಿಖಿತ ದಾಖಲೆಗಳು ಇರದ ಸಂದರ್ಭದಲ್ಲಿಯು ತನ್ನಷ್ಟಕ್ಕೆ ತಾನು ತನ್ನ ಸಾಮರ್ಥ್ಯದೊಳಗೆ ರೆಕ್ಕೆ ಪುಕ್ಕ ಬಿಚ್ಚಿ ತನ್ನ ಸೀಮಿತ (ಪ್ರದೇಶ) ದಲ್ಲಿ ಹಾರಾಡಬಯಸುತ್ತದೆ. ಇಂಥ ಹಾರಾಡುವ ಹಕ್ಕಿಯ ರೆಕ್ಕೆ ಪುಕ್ಕ ಎಣಿಸುವ ಕಾರ್ಯವೇ ದೇಸಿಯತೆಯ ಹುಡುಕಾಟವಾಗಿದೆ. ಈ ಮಾತುಗಳು 'ಬೊಮ್ಮಗೊಂಡೇಶ್ವರ : ಒಂದು ಅಧ್ಯಯನ' ಎಂಬ ನನ್ನ ವಿಷಯಕ್ಕೆ ಅನ್ವಯಿಸಿಕೊಂಡೇ ಹೇಳುತುದ್ದೇನೆ.

ಸ್ಥಳೀಯ ಚರಿತ್ರೆಗೆ ಪೂರಕ ಮಾಹಿತಿ ಒದಗಿಸಿಕೊಡುವ ಕಥೆ, ಐತಿಹ್ಯ, ಹಾಡು ಮುಂತಾದವುಗಳನ್ನು ಇಲ್ಲಿ ನೇರವಾಗಿ ಬಳಸಿಕೊಂಡಿರುತ್ತೇನೆ. ಜನಪದರ ಶ್ರೀಮಂತಕ್ಕೆ ಕಾರಣವಾಗಿರುವ ಎಲ್ಲ ಅಂಶಗಳು ಸ್ಥಳೀಯ ಚರಿತ್ರೆ ಕಟ್ಟುವಲ್ಲಿ ಅನುಕೂಲವಾಗುತ್ತವೆ. ಆದರೆ ಆಧುನಿಕದ ಧಾವಂತದಲ್ಲಿ ಸ್ಥಳೀಯ ವೈಶಿಷ್ಟ್ಯಗಳು ಮರೆಯಾಗುತ್ತಿವೆ. ಸ್ಥಳೀಯತೆ ಎನ್ನುವುದು ತನ್ನಲ್ಲಿ ತಾನು ಅಸ್ತಿತ್ವ ಸ್ಥಾಪಿಸಿಕೊಳ್ಳಬೇಕಾದರೆ ಜನಪದವನ್ನೊಳಗೊಂಡು ಪ್ರಾದೇಶಿಕತೆಯನ್ನು ತೆಕ್ಕೆಗೆ ತೆಗೆದುಕೊಳ್ಳಬೇಕು. ಅಧ್ಯಯನಕ್ಕೆ ಒಳಪಡಿಸಬೇಕು. ಇಲ್ಲದಿದ್ದರೆ ಸ್ಥಳೀಯತೆ ಅಥವಾ ಪ್ರಾದೇಶಿಕತೆ ಎನ್ನುವುದು ಹೇಳ ಹೆಸರಿಲ್ಲದೆ ಮಾಯವಾಗುವುದರಲ್ಲಿ ಸಂದೇಹವಿಲ್ಲ. ಹಳ್ಳಿಯ ಹಾಡುಗಳೆಂದರೆ ಮೂಗು ಮುರಿಯುವವರು ತನಗರಿವಿಲ್ಲದೆ ಅವನ್ನೇ ಮೆಲುಕು ಹಾಕುತ್ತಿರುತ್ತಾರೆ, ಎನ್ನುವ ಮಾತು ಸುಳ್ಳಲ್ಲ. ಕೇವಲ ಹಾಡುಗಳಷ್ಟೇ ಅಲ್ಲ, ಕಥೆ, ಐತಿಹ್ಯ, ಒಗಟು, ಒಡಪು ಮುಂತಾದವುಗಳು ಆಧುನಿಕ ಸಂದರ್ಭದಲ್ಲೂ ಜನರು ಮರೆತಿಲ್ಲ. ಆದರೆ ಹಾಗಂತ ಕೈಕಟ್ಟಿ ಕೂಡಲಾಗದು. ಅವುಗಳನ್ನು ಉಳಿಸಿಕೊಳ್ಳಬೇಕು. ಉಳಿಸಿಕೊಳ್ಳುವುದರ ಜೊತೆಗೆ ಅಧ್ಯಯನ, ಸಂಶೋಧನಕ್ಕೊಳಪಡಿಸಬೇಕು. ಸಂಶೋಧಿಸುವ ಸಂದರ್ಭದಲ್ಲಿ ಸ್ಥಳೀಯ ಜನರು ಆ ಪ್ರದೇಶವನ್ನು ನೋಡುವ ದೃಷ್ಟಿ, ಹಿನ್ನೆಲೆ, ಸಾಂಸ್ಕೃತಿಕ ಅಂಶಗಳನ್ನು ಜಾಲಾಡಿಸುವಂತಾಗಬೇಕು.

ಸ್ಥಳೀಯ ವ್ಯಕ್ತಿಗಳ ಕುರಿತ ಲಿಖಿತ ದಾಖಲೆಗಳಿರುವುದು ಕಡಿಮೆ. ಒಂದು ಹಸ್ತಪ್ರತಿಯೋ, ಒಂದು ಶಾಸನವೋ ದೊರೆತರೆ ಆ ಮೂಲಕವಾಗಿ ಸತ್ಯಾಸತ್ಯತೆಯನ್ನು ಕಂಡುಕೊಳ್ಳಬಹುದಾಗಿದೆ. ಆದರೆ ಇಂಥ ಯಾವುದೇ ದಾಖಲೆಗಳಿರದೆ ಹೋದರೆ ಚರಿತ್ರೆಯೊಂದನ್ನು ಕಟ್ಟುವುದು ಕಷ್ಟ. ಸ್ಥಳೀಯ ಚರಿತ್ರೆಗೆ

ಲಿಖಿತ ಆಧಾರವಿಲ್ಲದಾಗ ಮೌಖಿಕ ದಾಖಲೆಗಳು ಬಳಸಿಕೊಳ್ಳಬೇಕು. ಧರ್ಮ ರಕ್ಷಣೆಗಾಗಿಯೋ, ತನ್ನ ಜನರ ಒಳಿತಿಗಾಗಿಯೋ, ಯಾವುದೇ ಒಂದು ಮಹತ್ ಕಾರ್ಯ ಸಮಾಜದಲ್ಲಿ ಯಾರಿಂದಾದರೂ ಆದರೆ ಅವರನ್ನು ಮರೆಯುವುದು ನಮ್ಮ ಸಂಸ್ಕೃತಿ ಅಲ್ಲ. ಉಪಕಾರ ಮಾಡಿದವರಿಗೆ ಪ್ರತ್ಯುಪಕಾರ ಸಲ್ಲಿಸಬೇಕು, ಇದೇ ನಮ್ಮ ಸಂಸ್ಕೃತಿ ನಮಗೆ ಕಲಿಸುವ ಪಾಠ. ಯಾರಿಂದ ಉಪಕಾರ ಆಗಿದೆಯೋ ಅವರನ್ನು ನಮ್ಮ ಜನ ಎಂದಿಗೂ ಮರೆಯಲಾರರು. ಅವರನ್ನು ಸದಾ ನೆನಪಿನಲ್ಲಿ ಇಡಲು ಬಯಸುವರು. ಆದ್ದರಿಂದ ನಾಡಿನಾದ್ಯಂತ ಹೋರಾಡಿ ಸತ್ತ ಮಹಾನ್ ವ್ಯಕ್ತಿಗಳಷ್ಟೇ ಅಲ್ಲ, ಸಾಮಾನ್ಯ (ಸ್ಥಳೀಯ) ಜನರು ತ್ಯಾಗ ಬಲಿದಾನ ಕೊಟ್ಟ ಘಟನೆಗಳು ವೀರಗಲ್ಲುಗಳಂಥವುಗಳಿಂದ ತಿಳಿದುಬರುತ್ತವೆ. ವೀರಗಲ್ಲುಗಳಾಗಲಿ, ಸ್ಮಾರಕಗಳಾಗಲಿ, ಹಸ್ತಪ್ರತಿಗಳಾಗಲಿ ಗತಕಾಲದ ಇತಿಹಾಸದ ಮೇಲೆ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುತ್ತವೆ. ಬೊಮ್ಮಗೊಂಡೇಶ್ವರನ ಕುರಿತಂತೆ ದಾಖಲೆಗಳು ಇಲ್ಲದಾಗಿರುವುದರಿಂದ ಸ್ವಲ್ಪ ಕಷ್ಟದಿಂದ ಇವರ ಚರಿತ್ರೆಯನ್ನು ಕಂಡುಕೊಳ್ಳಬೇಕಾಗಿದೆ. ಜನಪದರ ನಾಲಿಗೆಯ ಆಧಾರದಿಂದಲೇ ಒಟ್ಟು ಕಟ್ಟಡವನ್ನು ಕಟ್ಟಿಕೊಳ್ಳಲು ಪ್ರಯತ್ನಿಸಿದ್ದೇನೆ.

ಬೀರಗೊಂಡ, ಮಾಳಗೊಂಡ, ಮೈಲಾರ ಮಲ್ಲಣ್ಣ ಇವರೆಲ್ಲರು ಒಂದಾನೊಂದು ಕಾಲದಲ್ಲಿ ಬದುಕಿ ತನ್ನ ಜನಾಂಗದ ನಾಯಕರಾಗಿ ತನ್ನ ಜನಾಂಗಕ್ಕಾಗಿ ದುಡಿದ ವ್ಯಕ್ತಿಗಳೇ ಮುಂದೆ ಬರಬರುತ್ತಾ ಅವರ ಹೆಸರಿನ ಮೇಲೆ ಕಲ್ಲೊಂದು ನೆಟ್ಟು ಅದನ್ನೆ ಪೂಜಿಸುತ್ತ ಆರಾಧಿಸುತ್ತಾ ಅದರ ಸುತ್ತ ದೇವಾಲಯ ನಿರ್ಮಿಸುತ್ತ ತನ್ನ ನಾಯಕನಿಗೆ ದೈವಿ ಪುರುಷನಾಗಿ ಮಾಡಿಕೊಂಡಿರುವುದನ್ನು ನೋಡುತ್ತೇವೆ. ಬೊಮ್ಮಗೊಂಡೇಶ್ವರನು ಕೂಡ ಒಂದು ಜನಾಂಗದ ನಾಯಕನಾಗಿ ಇವರ ದಾರಿಯನ್ನೇ ತುಳಿದಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಾಣಿಸುತ್ತದೆ.

ಜನಾಂಗವೊಂದರಲ್ಲಿ ಹುಟ್ಟಿದ ಒಬ್ಬ ವ್ಯಕ್ತಿ ತನ್ನ ಕಾರ್ಯವೈಖರಿಯಿಂದ ದೈವತ್ವಕ್ಕೆ ಏರಿ ನಿಂತಾಗ, ಆ ವ್ಯಕ್ತಿಯ ಹಿಂದೆ ಸಮೂಹ ಕೂಡ ದೈವೀಕರಿಸುವ ಕಾರ್ಯದಲ್ಲಿ ಹಿರಿದಾದ ಪಾತ್ರ ವಹಿಸುವುದು ಎಂಬುದು ಮುಖ್ಯವಾಗಿರುತ್ತದೆ. ಏಕೆಂದರೆ ವ್ಯಕ್ತಿ ಒಬ್ಬನನ್ನು ಪೂಜಿಸಿ ಆರಾಧಿಸಿ ಜಾತ್ರೆ, ಉತ್ಸವಗಳನ್ನು ಆತನ ಹೆಸರಿನಲ್ಲಿ ಮಾಡಿ ಜೊತೆ ಜೊತೆಗೆ ತನ್ನ ಸಮೂಹದ ಹಾಗೂ ತನ್ನ ಜನಾಂಗದ ನಾಯಕನ ಅಸ್ತಿತ್ವವನ್ನು ಉಳಿಸಿಕೊಳ್ಳುವುದೇ ಆಗಿರುತ್ತದೆ. ಸಮೂಹವೊಂದಕ್ಕೆ ತನ್ನಲ್ಲಿ ಆಗಿ ಹೋದಂತಹ ಅಸಾಮಾನ್ಯವೊಬ್ಬನನ್ನು ವೈಭವೀಕರಿಸುವ ಒತ್ತಡಗಳು ಇರುತ್ತವೆ, ಎಂಬುದು ಮರೆಯುವಂತಿಲ್ಲ. ಈ ಅಸ್ತಿತ್ವ ಸ್ಥಾಪಿಸುವಿಕೆ ಯಾವುದರ ಮೂಲಕವಾಗಿಯಾದರೂ ಆಗಬಹುದು ಅದು ಕಥೆಯಾಗಿರಬಹುದು, ಐತಿಹ್ಯ, ಹಾಡು, ಜಾತ್ರೆ, ಉತ್ಸವ, ದೇವಸ್ಥಾನ ನಿರ್ಮಿಸುವುದರ ಮೂಲಕವಾಗಿರಬಹುದು.

ಏಕೆಂದರೆ ನಾಗರಿಕ ಜನಾಂಗದ ಗಂಧ ಗಾಳಿಯೇ ಇಲ್ಲದ ಅರಣ್ಯವಾಸಿಗಳಾದ ಬುಡಕಟ್ಟು ಜನಾಂಗದವರು ತಮ್ಮ ನಡುವೆ ಆದ ಯಾವುದೇ ಘಟನೆಯನ್ನು ದಾಖಲೆ ಮಾಡಲು ಆಸ್ಪದವೇ ಇರಲಿಲ್ಲ. ನಿರ್ಮಲ, ಸರಳ ಜನಪದರ ಬದುಕಿನಲ್ಲಿ ಪ್ರಭಾವ ಬೀರಿದ ಬೊಮ್ಮಗೊಂಡೇಶ್ವರ ಅಥವಾ ಇಂಥ ವ್ಯಕ್ತಿಗಳ ಮೇಲೆ ಕಥೆ, ಕಟ್ಟಿ, ಹಾಡು ಕಟ್ಟಿ, ಅವರನ್ನು ನೆನಪಿನಂಗಳದಲ್ಲಿ ಹಚ್ಚ ಹಸುರಾಗಿಸಲು ಪ್ರಯತ್ನ ಪಟ್ಟಿರಲು ಸಾಧ್ಯವಿದೆ. ಈ ಸಾಧ್ಯ ಅಸಾಧ್ಯಗಳನ್ನೆ ಮುಖಾ-ಮುಖಿಯಾಗಿಸಿ ನೋಡಿದ್ದೇನೆ.

ಬೀದರ ಜಿಲ್ಲೆ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಮಾತ್ರ ಕಂಡು ಬರುವ ಈತನ ವರ್ಚಸ್ಸು ತುಂಬಾ ಕುತೂಹಲ ಮೂಡಿಸುತ್ತದೆ. ಜನಪದರು ಕಟ್ಟಿಕೊಡುವ ಈತನ ಚರಿತ್ರೆ, ಸ್ಥಳೀಯ ಚರಿತ್ರೆಯನ್ನು ಪುನಃ ಕಟ್ಟಲು ಪ್ರೇರೇಪಿಸುತ್ತದೆ. ಏಕೆಂದರೆ ಮೌಖಿಕ ಸಂತ್ತು ಅಥವಾ ಜನಪದ ಸಂಸ್ಕೃತಿಯ ಸ್ಥಳೀಯ ಚರಿತ್ರೆ ರಚನೆಗೆ ಪೂರಕವಾಗಿ ಕೆಲಸ ಮಾಡಬಲ್ಲವು. ಅಂದರೆ 'ಮೌಖಿಕ ಅಥವಾ ಜನಪದ ಆಕಾರಗಳ ಹಿನ್ನೆಲೆಯಲ್ಲಿ ಸ್ಥಳೀಯ ಚರಿತ್ರೆಯನ್ನು ಕಂಡುಕೊಂಡರೆ ಒಟ್ಟು ಚರಿತ್ರೆಯ ಮೂಲ ಸೆಲೆಯೇ ಬದಲಾವಣೆಗೊಳ್ಳುತ್ತದೆ'. ಎನ್ನುವ ಮಾತನ್ನು ಒಪ್ಪಿಕೊಂಡೆ ಈ ಅಧ್ಯಯನಕ್ಕೆ ತೊಡಗಿದ್ದೇನೆ.

ವ್ಯಕ್ತಿಯೊಬ್ಬನು ಇತಿಹಾಸದಲ್ಲಿ ಮಾಡಿದಂಥ ಜನೋಪಯೋಗಿ ಕಾರ್ಯ ಹಾಗೂ ಇತಿಹಾಸದಲ್ಲಿ ನೆಲೆಯೂರಲಾಗದಂಥ ಸಂದರ್ಭಗಳ ನಡುವಿನ ತಾಕಲಾಟದಲ್ಲಿ ಜನಪದರ ತೋಳ ಬಂಧದಲ್ಲಿ ತನ್ನ ತಾನೇ ಅಸ್ತಿತ್ವವನ್ನು ಸ್ಥಾಪಿಸಿಕೊಂಡಂಥ ಬೊಮ್ಮಗೊಂಡೇಶ್ವರ ಪ್ರಾಯಶಃ ಇತಿಹಾಸದಿಂದ ದೂರ ಉಳಿದಿರಬಹುದು ಅಥವಾ ಬೆಳಕಿಗೆ ಬಾರದೇ ಇರಬಹುದು. ಆದರೆ ಜನಪದರ ಬಾಯಲ್ಲಿ ಇವನ ಹೆಸರು ಅಜರಾಮರವಾಗಿ ಉಳಿದ್ದದ್ದು ಕಂಡು ಬರುತ್ತದೆ. ಬೊಮ್ಮಗೊಂಡೇಶ್ವರರ ಇತಿಹಾಸದಿಂದ ದೂರ ಉಳಿದದ್ದು ವಿಷಾದದ ಸಂಗತಿಯೇ ಸರಿ. ''೧೫ನೇ ಶತಮಾನದ ಬಹುಮನಿ ಸಾಮ್ರಾಜ್ಯದ ಇತಿಹಾಸದಲ್ಲಿ ಬಹಮನಿ ಸಾಮ್ರಾಜ್ಯ ಸ್ಥಾಪನೆಗೆ ಮೂಲ ಕಾರಣಕರ್ತನಾದ ಮಹಾತ್ಮ ಬೊಮ್ಮಗೊಂಡೇಶ್ವರನ ಇತಿಹಾಸ ನಿರ್ಲಕ್ಷಿತವಾಗಿರುವುದು ವಿಪರ್ಯಾಸವೇ ಸರಿ.''[೨]

'ಕಾಲ ಎಲ್ಲವನ್ನು ಮರೆಸುತ್ತದೆ' ಎಂಬ ಮಾತು ಬೊಮ್ಮಗೊಂಡೇಶ್ವರನ ಸಂದರ್ಭದಲ್ಲಿ ಸುಳ್ಳಾಗುತ್ತದೆ. ಏಕೆಂದರೆ ಕಾಲಗರ್ಭದಲ್ಲಿ ಈತನ ಚರಿತ್ರೆ ನಿಶ್ಚಿತವಾಗಿ ಕಾಣದೇ ಹೋದರೂ ಹಾಗೂ ಲಿಖಿತ ದಾಖಲೆಗಳ ಕೊರತೆ ಇದ್ದರೂ ಜನಪದರ ಮನದಲ್ಲಿ ತನ್ನ ಭದ್ರಬುನಾದಿಯನ್ನು ಹಾಕಿಕೊಂಡಿದ್ದಾನೆ. ಅಲ್ಲಲ್ಲಿ ಕಾಣುವ ಈತನ ಮೂರ್ತಿಗಳು, ಗುಡಿಗಳು, ಸ್ವಸಹಾಯ ಗುಂಪುಗಳು, ಶಿಕ್ಷಣ ಸಂಸ್ಥೆ, ಜಾತ್ರೆ- ಉತ್ಸವ ಮುಂತಾದವುಗಳು ಈತನ ಕಾರ್ಯವೈಖರಿಯ ಕುರಿತು ಕುತೂಹಲ ಕೆರಳಿಸುವುದರ ಜೊತೆ ಜೊತೆಗೆ ತನ್ನ ಅಸ್ತಿತವವನ್ನು ಉಳಿಸಿಕೊಂಡಿದ್ದು ಆಶ್ಚರ್ಯ ಮೂಡಿಸುತ್ತದೆ.

ಬೊಮ್ಮಗೊಂಡೇಶ್ವರ ಕುರಿತ ಪವಾಡಗಳು ಪ್ರಚಲಿತವಿದ್ದಂತೆ, ಅವನ ಉರಿತ ಐತಿಹ್ಯಗಳು, ಕಥೆಗಳು, ಹಾಡು-ವಚನಗಳೂ ಕೂಡ ನಮಗೆ ಕಾಣಸಿಗುತ್ತವೆ. ಆದರೆ ಇವು ಎಲ್ಲವುಗಳನ್ನು ಒಂದು ಸೂಡಿಗೆ ಕಟ್ಟಿ ಅಧ್ಯಯನ ನಡೆಸುವ ಸಾಹಸ ಯಾರೂ ಮಾಡಲಿಲ್ಲ. ಈತನ ಕುರಿತ ಅಧ್ಯಯನದ ಒಂದು ಮಹತ್ವದ ಲಾಭವೆಂದರೆ ಈಗಾಗಲೇ ಹೇಳಿರುವಂತೆ ಸ್ಥಳೀಯ ಚರಿತ್ರೆಯ ಮೇಲೆ ಬೆಳಕು ಚೆಲ್ಲುವುದರ ಜೊತೆಗೆ ಈತನ ಕುರಿತ ಜನಪದರ ಬಾಯಲ್ಲಿರುವ ಪವಾಡಗಳು, ಕಥೆಗಳು, ಐತಿಹ್ಯಗಳು, ದೇವಾಲಯಗಳು, ಸ್ಮಾರಕಗಳು ಹೀಗೆ ಎಲ್ಲವುಗಳನ್ನು ಸೇರಿಸಿ ಚೌಕಟ್ಟನ್ನು ನಿರ್ಮಿಸಿ ದಾಖಲೆಗೊಳಪಡಿಸುವುದೇ ಆಗಿದೆ.

---

**ಅಡಿ ಟಿಪ್ಪಣಿ :**

೨. 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂ. ಎಚ್.ಸಿ.ಶಿವಕುಮಾರ, ಪು. ೬.

ಬೊಮ್ಮಗೊಂಡೇಶ್ವರನ ಜೊತೆಗೆ ಈತನ ಗುರುವಾದ ವೀರಸಂಗಯ್ಯನ ಚರಿತ್ರೆ ಕೂಡ ನಮಗೆ ಮಿಂಚಿನಂತೆ ಕಾಣಸಿಗುತ್ತದೆ. ಈತನ ಚರಿತ್ರೆಯ ಮೇಲೆ ಸ್ವಲ್ಪ ಮಟ್ಟಿಗೆ ಬೆಳಕು ಚಲ್ಲುತ್ತಾನೆ ಬೊಮ್ಮಗೊಂಡೇಶ್ವರ. ವೀರಸಂಗಯ್ಯನೆಂಬ ಹಿಂದು ರಾಜನೊಬ್ಬನಿದ್ದು ಈತನ ಕಾಲ ಬೊಮ್ಮಗೊಂಡೇಶ್ವರನಕ್ಕಿಂತಲೂ ಎರಡು ಮೂರು ಶತಮಾನಗಳ ಹಿಂದೆ ಸರಿದು ಹೋಗುತ್ತದೆ. ಬೀದರ ಕೋಟೆಯೊಳಗೆ ಈತನ ಗದ್ದುಗೆ ಇದೆ. ಅಷ್ಟೇ ಅಲ್ಲ ಈತನ ಸಮಕಾಲಿನ ಅರಸರ ಕುರಿತು ಬೊಮ್ಮಗೊಂಡ ತಿಳಿಸುತ್ತಾನೆ.

ಹೀಗೆ 'ಬೊಮ್ಮಗೊಂಡೇಶ್ವರ : ಒಂದು ಅಧ್ಯಯನ' ಎಂಬ ವಿಷಯವು ಒಂದೇ ಒಂದು ಉದ್ದೇಶ ಇಟ್ಟುಕೊಂಡು ಹೊರಡದೇ ತನ್ನ ತೆಕ್ಕೆಯೊಳಗೆ ಅನೇಕಾನೇಕ ಉದ್ದೇಶಗಳನ್ನಿಟ್ಟುಕೊಂಡು ಹೊರಟಿರುವುದು ಈ ಮೂಲಕ ಗಮನಕ್ಕೆ ತಂದಿರುತ್ತೇನೆ. ಈ ಅಧ್ಯಯನಕ್ಕೆ ಜನಪದೀಯ ವಿಧಾನ ಅನುಸರಿಸಿಕೊಂಡಿದ್ದೇನೆ. ಬೊಮ್ಮಗೊಂಡೇಶ್ವರನ ಒಟ್ಟು ಬದುಕನ್ನು ಕಟ್ಟಲು ಜನಪದ ಆಕರಗಳನ್ನು ಬಳಸಿಕೊಂಡು ಗಟ್ಟಿ ನಿರ್ಧಾರಕ್ಕೆ ಬರಲು ಹಾಗೂ ವಿಷಯವೊಂದನ್ನು ವಿಶ್ಲೇಷಿಸುವ, ಸಂಶೋಧಿಸುವ ಸಾಧ್ಯತೆಗಳಿವೆಯೋ ಅವು ಎಲ್ಲವನ್ನು ಕಣ್ಣೆದುರಿಗೆ ಹರವಿಕೊಂಡು ಸ್ಪಷ್ಟ ನಿಲುವಿಗೆ ಬರಲು ಪ್ರಯತ್ನಿಸಿದ್ದೇನೆ. ಅಪ್ಪಟ ಐತಿಹಾಸಿಕ ದೃಷ್ಟಿಯನ್ನಿಟ್ಟುಕೊಂಡು ಬೊಮ್ಮಗೊಂಡೇಶ್ವರನನ್ನು ಸಂಶೋಧಿಸಲು ಸಾಧ್ಯವಾ(ಗಿಲ್ಲ)ಗುವುದಿಲ್ಲ. ಕಾರಣ ಈತನ ಒಟ್ಟು ಜೀವನ ಚಿತ್ರಣ ಜನಪದರ ನಾಲಿಗೆ ಮೇಲೆ ಮಾತ್ರ ನರ್ತಿಸುತ್ತದೆ. ಈತನ ಒಟ್ಟು ವ್ಯಾಪ್ತಿ ಅಥವಾ ಪಸರಿಸುವಿಕೆ ಜನಪದರಿಗರಲ್ಲಿ ವಿನಃ ಲಿಖಿತ ರೂಪದೊಳಗೆ ಕಂಡು ಬರುವುದಿಲ್ಲ ಎನ್ನುವುದಕ್ಕಿಂತ ಬಹಳ ಕಡಿಮೆ ಎಂದೇ ಹೇಳಬಹುದು. ಜನಪದರ ಆಧಾರದ ಮೇಲೆ ನಿಂತ ನನ್ನ ಈ ಅಧ್ಯಯನ ಜನಪದೀಯ ಹಿನ್ನೆಲೆಯಲ್ಲಿಯೇ ಇದೆ. ಅದಕ್ಕಾಗಿ 'ಬೊಮ್ಮಗೊಂಡೇಶ್ವರ ಃ ಒಂದು ಅಧ್ಯಯನ' ಎನ್ನುವುದಕ್ಕಿಂತ ಇದೊಂದು ಜನಪದೀಯ ಅಧ್ಯಯನ ಎನ್ನುವುದು ಹೆಚ್ಚು ಸೂಕ್ತವೆನಿಸುತ್ತದೆ.

ಹಲವಾರು ಕಾರಣಗಳಿಂದ ಕಾಲಘಟ್ಟದಲ್ಲಿ ಮರೆಯಾಗಿರುವ ಸಮೂದಾಯಗಳು, ಜನವರ್ಗಗಳು, ಧರ್ಮಗಳು ಬೆಳಕಿಗೆ ಬರುವ ಸಂದರ್ಭಗಳು ಬರುತ್ತವೆ. ಅವುಗಳು ಹಿನ್ನೋಟ ಕ್ರಮದಿಂದ ತಮ್ಮ ವರ್ತಮಾನದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಳ್ಳುತ್ತವೆ. ತಾವು ಇದ್ದ ಸ್ತರದಿಂದ ಮೆಲೇಳಲು ಪ್ರಯತ್ನಿಸುತ್ತವೆ ಪುನರುಜ್ಜೀವನಗೊಳ್ಳಲು ಹವಣಿಸುತ್ತವೆ. ಈ ಪ್ರಕ್ರಿಯೆಯಲ್ಲಿ ಅನೇಕ ಹೋರಾಟಗಳು, ಆಂದೋಲನಗಳು, ಸಂಘಟನೆ, ಸಂಘರ್ಷಗಳು ಜರುಗುತ್ತವೆ. ಬೊಮ್ಮಗೊಂಡೇಶ್ವರ ನಾಮದಡಿಯಲ್ಲಿ ಗೊಂಡರು ಈ ಜಿಲ್ಲೆಯಲ್ಲಿ ಇದೇ ತರಹದ ಪ್ರಯತ್ನಗಳ ಮೂಲಕ ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಂಡಿದ್ದಾರೆ. ವ್ಯಕ್ತಿಯೊಬ್ಬ ತನ್ನ ಜನಾಂಗದ ಪರಿಸರದ ಏಳು-ಬೀಳಿಗೆ ಸೋಲು-ಗೆಲುವುಗಳಿಗೆ ಕಾರಣನಾಗುತ್ತಾನೆಂಬುದು ಈ ಅಧ್ಯಯನ ಬಿಚ್ಚಿ ತೋರಿಸುತ್ತದೆ. ಮೌಖಿಕವಾಗಿ ಹರಿದು ಬಂದ ಚರಿತ್ರೆಯಿಂದಲೇ ಸಮುದಾಯದಲ್ಲಿ ಅಭಿಮಾನವನ್ನು ಮೂಡಿಸಿ ಸಂಘಟಿತಗೊಳ್ಳಲು ಪ್ರವರ್ತರಾಗಿದ್ದಾರೆ ಎನ್ನುವುದು ಮನಗಾಣಿಸಿಕೊಳ್ಳಬಹುದು.

- - -

## ಆಧಾರ ಗ್ರಂಥಗಳು

(೧) 'ಸ್ಥಳೀಯ ಚರಿತ್ರೆ : ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ'
ಸಂ. ಪ್ರೊ॥ ಲಕ್ಷ್ಮಣ ತೆಲಗಾವಿ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬
೨೦೦೩

(೨) 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂಪುಟ ೪, ಸಂಚಿಕೆ ೪, ನವೆಂಬರ ೧೯೯೭.
ಸಂ. ಎಚ್.ಸಿ. ಶಿವಕುಮಾರ
ಲೇಖನ : 'ನಿರ್ಲಕ್ಷಿತ ಇತಿಹಾಸದಲ್ಲಿ ಬೊಮ್ಮಗೊಂಡೇಶ್ವರರ ಚರಿತ್ರೆ'
ಲೇಖಕರು : ಡಾ॥ ಕೆ.ಎಂ. ಮೈತ್ರಿ
ಕನಕ ಪ್ರತಿಷ್ಠಾನ, ಶ್ರೀ ಕಾಗಿನೆಲೆ ಮಹಾ ಸಂಸ್ಥಾನ, ಕನಕ ಗುರುಪೀಠ ,
ಕಾಗಿನೆಲೆ - ೫೮೧ ೧೫೩

# ೨. ಬೊಮ್ಮಗೊಂಡೇಶ್ವರನ ಬದುಕು

ಬೊಮ್ಮಗೊಂಡೇಶ್ವರ ಬೀದರ ಜಿಲ್ಲೆಯಲ್ಲಿ ಆಗಿ ಹೋದ ಒಬ್ಬ 'ಐತಿಹಾಸಿಕ ವ್ಯಕ್ತಿ' ಎನ್ನಬಹುದು. ಗೊಂಡ ಬುಡಕಟ್ಟಿನವರಾದ ಇವರು ಇಲ್ಲಿನ ಜನಪದರ ಮೇಲೆ ತನ್ನದೇ ಆದ ಪ್ರಭಾವವನ್ನು ಬೀರಿದ್ದಾರೆ. ಗೊಂಡರ ನೆಲೆಗಳಲ್ಲೆಲ್ಲ ಬೊಮ್ಮಗೊಂಡೇಶ್ವರನ ಮೂರ್ತಿಗಳು ನಿರ್ಮಾಣಗೊಂಡಿದ್ದು ಕಾಣಸಿಗುತ್ತವೆ. ಅಷ್ಟೇ ಅಲ್ಲ ಅಲ್ಲಲ್ಲಿ ದೇವಸ್ಥಾನಗಳನ್ನು ನಿರ್ಮಿಸಿ ಜಾತ್ರೆ, ಭಜನೆ, ಉತ್ಸವ, ಮೆರವಣಿಗೆ ಮುಂತಾದವುಗಳನ್ನು ಇಲ್ಲಿಯ ಜನಪದರು ಮಾಡುತ್ತಾರೆ.

ಇತಿಹಾಸದಲ್ಲಿ 'ಬೊಮ್ಮಯ್ಯ' ಎಂಬ ಹೆಸರಿನ ಅನೇಕ ವ್ಯಕ್ತಿಗಳು ಆಗಿ ಹೋಗಿದ್ದಾರೆ. ಶರಣ ಕಿನ್ನರಿ ಬೊಮ್ಮಯ್ಯ, ಬಿಜ್ಜಳನನ್ನು ಕೊಂದ ಮೊಲ್ಲೆ ಬೊಮ್ಮಯ್ಯ, ಕೋವುರು ಬೊಮ್ಮಯ್ಯ, ಕಲಕೀತ ಬೊಮ್ಮಯ್ಯ ಮುಂತಾದವರು ಬೊಮ್ಮಯ್ಯನ ಹೆಸರಿನ ವ್ಯಕ್ತಿಗಳು ಇತಿಹಾಸದಲ್ಲಿ ಕಂಡು ಬರುತ್ತಾರೆ. ಗೊಂಡ ಬುಡಕಟ್ಟಿನಲ್ಲಿ ಹುಟ್ಟಿದ ಬೊಮ್ಮಗೊಂಡೇಶ್ವರ ಎಂಬ ವ್ಯಕ್ತಿ ಕೂಡ ಒಬ್ಬ ನಾಯಕನಾಗಿ, ಮಹಾತ್ಮನಾಗಿ, ಶರಣನಾಗಿ ಮೆರೆದಿದ್ದಾನೆ.

'ಬೊಮ್ಮಯ್ಯ' ಎಂಬುದು ಈತನ ಮೂಲ ಹೆಸರೆಂದು ತೋರುತ್ತದೆ. 'ಗೊಂಡ' ಎಂಬ ಪದ ಜಾತಿ ಸೂಚಕವಾಗಿ ಹತ್ತಿಕೊಂಡಂತಿದೆ 'ಬೊಮ್ಮ' ಎಂಬುದರ ಶಾಬ್ದಿಕ ಅರ್ಥ ಬ್ರಹ್ಮ, ಪರಮಾತ್ಮ, ಸೃಷ್ಟಿಕರ್ತ ಎಂದಾಗಿದೆ. ಪರಮಾತ್ಮ ಅಥವಾ ಈಶ್ವರನ ಕರುಣೆಯಿಂದ ಪವಾಡ ಪುರುಷನಾಗಿದ್ದುದ್ದರಿಂದ ಈಶ್ವರ ಎಂಬ ವಿಶೇಷ ನಾಮಪದವು ಸೇರಿಕೊಂಡಿದೆ. ಬೊಮ್ಮಯ್ಯ- ಬೊಮ್ಮಗೊಂಡನೆಂತಲೂ, ಬೊಮ್ಮಗೊಂಡ-ಬೊಮ್ಮಗೊಂಡೇಶ್ವರನೆಂತಲೂ ಬದಲಾದಂತೆ ಕಂಡುಬರುತ್ತದೆ. ಅದೇನೇ ಇದ್ದರೂ ಬೊಮ್ಮಗೊಂಡ ಅಥವಾ ಬೊಮ್ಮಗೊಂಡೇಶ್ವರ ಎಂಬ ಹೆಸರೇ ಬೀದರ ಜಿಲ್ಲೆ ಹಾಗೂ ಸುತ್ತ ಮುತ್ತಲಿನ ಕೆಲವು ಹಳ್ಳಿಗಳಲ್ಲಿ ಪ್ರಚಾರದಲ್ಲಿದೆ.

ಬೀದರನ ಪುನರ ನಿರ್ಮಾಣಕ್ಕೆ ಕಾರಣನಾದ ಬಹಮನಿ ಅರಸ ಸುಲ್ತಾನ ಅಹಮದ ಹಾಗೂ ಮೂರನೇ ಮಹಮ್ಮದನ ನಡುವೆ ಬೊಮ್ಮಗೊಂಡೇಶ್ವರರ ಕಾಲ ಅಥವಾ ಚರಿತ್ರೆ ಕಗ್ಗತ್ತಲಿನಂತೆ ಎದುರುಗೊಳ್ಳುತ್ತದೆ. ಬೀದರ ಕೋಟೆ ನಿರ್ಮಾಣಕ್ಕೆ ಮೂಲ ಪ್ರೇರಕ ಬೊಮ್ಮಗೊಂಡೇಶ್ವರ ಎಂಬುದು ಜನಪದರ ಹೇಳಿಕೆ. 'ಸುಲ್ತಾನ ಸುರಳಿ'ಯಲ್ಲಿ ಬೊಮ್ಮಗೊಂಡನು ಅಹಮದಷಾಹನ ಜೊತೆಗೆ ಮಾಡಿದ ಭೇಟಿ ಈ ಮಾತಿಗೆ ಹೆಚ್ಚು ಪುಷ್ಟಿಯನ್ನು ಒದಗಿಸುತ್ತದೆ. ಇದಲ್ಲದೇ ಇತಿಹಾಸದ ಪುಟಗಳನ್ನು ತಿರುಗಿಸಿ ನೋಡಿದಾಗ ಈ ಮಾತಿಗೆ ಪೂರಕವಾದ ಕೆಲ ಅಂಶಗಳು ಕಾಣಿಸುತ್ತವೆ. ಅವುಗಳೆಂದರೆ ''೧೩೪೭ರಲ್ಲಿ ದಕ್ಷಿಣದಲ್ಲಿ ಬಹುಮನಿ ರಾಜ್ಯದ ಉದಯ, ಸುಲ್ತಾನ ಅಹಮದಷಾನು (೧೪೨೨-೩೫) ಅತ್ಯಂತ ಪ್ರಸಿದ್ಧ ಬೀದರ ಅವನ ರಾಜಧಾನಿಯಾಯಿತು. ಮೊದಲು ಗುಲ್ಬರ್ಗಾವನ್ನು ನಂತರ ಬೀದರ ರಾಜಧಾನಿಯಾಗಿ ಮಾಡಿಕೊಂಡು ಇದರ ಪುನರ್ ನಿರ್ಮಾಣಕ್ಕೆ ಕಾರಣನಾದನು. ಸುಲ್ತಾನ ಮೂರನೇ ಮಹಮ್ಮದಷಾನು (೧೪೮೨) ಬಹಮನಿ ರಾಜ್ಯದ ಕೊನೆಯ ಬಲಾಢ್ಯ ಸುಲ್ತಾನ. ಈತನ ಆಳ್ವಿಕೆಯಲ್ಲಿ ಬಹಮನಿ ರಾಜ್ಯದ ಕೀರ್ತಿ ಎಲ್ಲೆಡೆ ಹಬ್ಬಿತು. ಸಾಮ್ರಾಜ್ಯ ಸಂಪದ್ಭರಿತವಾಗಿ ವೈಭವದಿಂದೊಡಗೂಡಿತ್ತು. ಮಹಮ್ಮದ ಗವಾನ ಈತನ ಪ್ರಧಾನ ಮಂತ್ರಿಯಾಗಿದ್ದ ಎಂಬುದು ಗೊತ್ತಾಗುತ್ತದೆ. ಬೊಮ್ಮಗೊಂಡೇಶ್ವರನು ಜೀವಿಸಿರುವ

ಕಾಲ ಸುಲ್ತಾನ ಅಹಮದಷಾ (ಕ್ರಿ.ಶ. ೧೪೨೨-೧೪೩೬) ನಿಂದ ಮೂರನೇ ಮಹಮ್ಮದ (ಕ್ರಿ.ಶ. ೧೪೬೩-೧೪೮೨) ನ ಕಾಲದಲ್ಲಿದ್ದನು. ಕ್ರಿ.ಶ. ೧೪೨೨-೨೩ ರಲ್ಲಿ ಬೀದರನಲ್ಲಿ ಅನಾವೃಷ್ಟಿಯಾಗಿ ಬರಗಾಲವಿದ್ದಾಗ ಬಹುಮನಿ ರಾಜ ಅಹಮದಷಾನಿಗೆ ನೀರು ಕುಡಿಸಿದನು (ಸುಲ್ತಾನ ಸುರಳಿ). ೧೪೭೫ ರಲ್ಲಿ ಬಹಮನಿ ಸುಲ್ತಾನ ಮಾಳವ ಅರಸರಿಂದ ಸೋತಿದ್ದಾಗ ಬೊಮ್ಮಗೊಂಡನು ಸುಲ್ತಾನ ಮೂರನೇ ಮಹಮದ ರಾಣಿ ಮುಕದುಮ ಜಹಾನ ಹಾಗೂ ಅವರ ಪರಿವಾರಕ್ಕೆ ಕಟ್ಟಿಗೆ ಮಾರುವವರಂತೆ ಲಂಬಾಣಿ ವೇಷದಲ್ಲಿ ಬೀದರದಿಂದ ಗುಲ್ಬರ್ಗಕ್ಕೆ ಕರೆದೊಯ್ದನು. ಬೊಮ್ಮಗೊಂಡನು ಶತಾಯುಷಿಗಳಾಗಿದ್ದನು. ಈ ಎಲ್ಲ ಆಧಾರಗಳ ನೆಲೆಗಟ್ಟಿನ ಮೇಲೆ ಅವರ ಕಾಲ ಕ್ರಿ.ಶ ೧೩೮೦ ರಿಂದ ೧೪೮೦ ಆಗಿರಬೇಕು. ತುರ್ಕ ಜಹಾನ ಕೊಲೆಯಾದ ಮೇಲೆ ಇಡಿ ಬಹಮನಿ ಸಾಮ್ರಾಜ್ಯಕ್ಕೆ ಮಹಮದ ಗವಾನನೇ ಸಾರ್ವಭೌಮನಾದನು. ಕಾರಣ ಸುಲ್ತಾನ ಭೋಗ ಜೀವನದಲ್ಲಿ ತಲ್ಲೀನನಾಗಿದ್ದ. ಮಹಮದ ಗವಾನನು ಒರಿಸ್ಸಾದ ದೊರೆಯೊಡನೆ ಬಹಮನಿ ದೊರೆಯ ವಿರುದ್ಧ ಒಳಸಂಚು ಮಾಡಿಕೊಂಡಿದ್ದು ಹಾಗೂ ಬಹಮನಿ ರಾಜ್ಯದ ಸುಲ್ತಾನನನ್ನು ಕೊಲೆ ಮಾಡಿ ಇಡಿಯ ರಾಜ್ಯವನ್ನೇ ಕಬಳಿಸುವ ಯೋಜನೆ ಹಾಗೂ ಒರಿಸ್ಸಾದ ದೊರೆಗೆ ಅರ್ಧ ರಾಜ್ಯ ಕೊಡುವುದು ಇವೇ ಮುಂತಾದ ಕುಹಕ ಯೋಜನೆಗಳಾಗಿದ್ದವು. ಈ ಷಡ್ಯಯಂತ್ರ ಬೊಮ್ಮಗೊಂಡ ಅರಿತಿದ್ದರಿಂದ ತನ್ನಲ್ಲಿದ್ದ ಪರುಷದ ಪುತ್ಥಳಿ (ಕಲ್ಪತರು) ಕೋಟೆಯ ಕೆರೆಯಲ್ಲಿಯ ಕುಂಡದಲ್ಲಿಟ್ಟು ಮುರಳಿ ಬರುತ್ತಿರುವಾಗ ಗವಾನನ ಬೆಂಬಲಿಗರು ಬೊಮ್ಮಗೊಂಡನಿಗೆ ಕೆರೆಯಲ್ಲಿ ಜಲಸಮಾಧಿ ಮಾಡಿದರು. ಅರ್ಥಾತ್ ಕೆರೆಯಲ್ಲಿಯೇ ಮುಳುಗಿಸಿ ಕೊಲೆ ಮಾಡಿದರು. ಆದರೆ ಇದು ಗುಪ್ತವಾಗಿ ನಡೆಸಿದ್ದರಿಂದ ಜನಸಾಮಾನ್ಯರು ಸಾಮಾನ್ಯ ಸಾವು ಎಂದು ನಂಬಿ ಕೆರೆಯ ಕಟ್ಟೆಯ ಮೇಲೆ ಅವರ ಮೋಕ್ಷ (ಸಮಾಧಿ) ಮಾಡಿದರು. ಮಹಮೂದ ಗವಾನನ ಮರಣಕ್ಕಿಂತ ಸುಮಾರು ಒಂದು ವರ್ಷ ಮೊದಲೇ ಬೊಮ್ಮಗೊಂಡನ ಕೊಲೆ ಆಗಿರಬಹುದಾಗಿದೆ.'' [೧]

ಒಟ್ಟಾರೆಯಾಗಿ ಬೊಮ್ಮಗೊಂಡನ ಕಾಲ ಕುರಿತು ಖಚಿತವಾದ ಲಿಖಿತ ಆಧಾರಗಳ ಕೊರತೆ ಇದ್ದುದ್ದಕ್ಕಾಗಿ ಮೌನ ವಹಿಸಿ ಮುಂದೆ ಹೋಗಬೇಕಾಗುತ್ತದೆ. ಈತನ ಕಾಲದ ಕುರಿತು ಖಚಿತತೆ ಇರದಿದ್ದರೂ ಕೂಡ ಬಹುಮನಿ ಸುಲ್ತಾನರ ಕಾಲದಲ್ಲಿ (೧೩೮೦-೧೪೮೦) ಆಗಿ ಹೋದಂಥ ಒಬ್ಬ ಐತಿಹಾಸಿಕ ಪವಾಡ ಪುರುಷ ಇವನಾಗಿದ್ದಾನೆ ಎಂದು ಹೇಳಬಹುದು. ಈತನ ಹೆಸರೇ ಹೇಳುವಂತೆ ಈತ ಗೊಂಡ ಬುಡಕಟ್ಟಿಗೆ ಸೇರಿದವನು.

''ಬೀದರ ಜಿಲ್ಲೆಯಲ್ಲಿ ಮುಖ್ಯವಾಗಿ ಐದು ಬುಡಕಟ್ಟುಗಳನ್ನು ಗುರುತಿಸಬಹುದು ಅವು: ಗೊಂಡ, ಟೋಕರಿಕೋಳಿ, ಬೇಡ, ಮೇದ ಮತ್ತು ಅಲೆಮಾರಿ ರಾಜಗೊಂಡ. ಇವುಗಳಲ್ಲಿ ಗೊಂಡ ಬುಡಕಟ್ಟು ಭಾರತದ ಅತೀ ಪ್ರಾಚೀನ ಜನಾಂಗಗಳಲ್ಲಿ ಒಂದು. ಭಾರತದ ವಿವಿಧ ಪ್ರದೇಶಗಳಲ್ಲಿ ಅಷ್ಟೇ ಅಲ್ಲ ಕರ್ನಾಟಕದಲ್ಲಿಯೂ ಗೊಂಡರು ಹೆಚ್ಚಿನ ಸಂಖ್ಯೆಯಲ್ಲಿ ಸಿಗುತ್ತಾರೆ. ಗೊಂಡರು ಬೀದರ ಗುಲ್ಬರ್ಗಾ ಮತ್ತು ಉತ್ತರ ಕನ್ನಡ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದು, ಉಳಿದೆಲ್ಲ ಜಿಲ್ಲೆಗಳಲ್ಲಿಯೂ ಇವರ ನೆಲೆಗಳನ್ನು ಗುರುತಿಸಲಾಗಿದೆ.' [೨] ಅಧ್ಯಯನದ ಮಿತಿಗಾಗಿ ಬೀದರ ಜಿಲ್ಲೆಗೆ ಮಾತ್ರ ಸೀಮಿತಗೊಂಡು

---

**ಅಡಿ ಟಿಪ್ಪಣಿ :**

೧. 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂ. ಎಚ್.ಸಿ.ಶಿವಕುಮಾರ, ಪು. ೨೦.

೨. 'ಕರ್ನಾಟಕದ ಬುಡಕಟ್ಟುಗಳು' ಸಂಪುಟ ೧., ಪ್ರ.ಸಂ. ಡಾ॥ ಹೆಚ್.ಜೆ.ಲಕ್ಕಪ್ಪಗೌಡ, ಪು. ೧೫೩.

ನೋಡಿದರೆ ''ಬೀದರ ಒಂದು ಪುಟ್ಟ ಜಿಲ್ಲೆ ಇಲ್ಲಿಯ ಮೂಲನಿವಾಸಿಗಳು ಗೊಂಡರು. ಇವರು ದ್ರಾವಿಡ ಮೂಲದವರು ಇವರಿಗೆ ಧನಗರ ಮತ್ತು ಕುರುಬ ಎಂಬ ಹೆಸರುಗಳಿಂದಲೂ ಪರಿಚಯಿಸಲಾಗುವುದು. ಗೊಂಡ, ರಾಜಗೊಂಡ, ಧನಗರ ಹಾಗೂ ಕುರುಬ ಎಂಬ ಪದಗಳು ಬೇರೆ ಬೇರೆ ಕಂಡರೂ ಬೀದರ ಮತ್ತು ಗುಲ್ಬರ್ಗಾ ಜಿಲ್ಲೆಯಲ್ಲಿ ಅವುಗಳೆಲ್ಲ ಒಂದೇ ಜನಾಂಗವನ್ನು ಗುರುತಿಸುವ ಪದಗಳಾಗಿವೆ.''[೩]

ಯಾವುದೇ ಬುಡಕಟ್ಟು ಸಮಾಜದ ಇತರ ಯಾವುದೇ ಸಮುದಾಯಕ್ಕೆ ತೊಂದರೆ ಕೊಡದೇ ತನ್ನ ಪಾಡಿಗೆ ತಾನು ತನ್ನತನವನ್ನು ಉಳಿಸಿ ಕೊಳ್ಳಲು ಪ್ರಯತ್ನಿಸುತ್ತದೆ. ನಿಷ್ಕಲ್ಮಷ ನಿಸ್ವಾರ್ಥ ಜೀವನ ಅವರದು. ಅದರಲ್ಲೂ ಗೊಂಡ ಬುಡಕಟ್ಟಿನವರು ತೀರ ಸಾಧು ಸ್ವಭಾವದವರು. ಎಚು-ಪೆಚು ಅರ್ಥವಾಗದಂಥವರು ಸದಾ ಕುರಿಗಳ ಒಡನಾಟದಲ್ಲಿರುವ ಇವರು ಅದರ ಸ್ವಭಾವವನ್ನೇ ರೂಢಿಸಿಕೊಂಡಂತಿದೆ ಎನ್ನಲು ಅಡ್ಡಿ ಇಲ್ಲ.

ಇಂಥ ಸಹಜ ಸಾದಾ ಬುಡಕಟ್ಟಿನಲ್ಲಿ ಹುಟ್ಟಿದವರು ಬೊಮ್ಮಗೊಂಡೇಶ್ವರನು ಇವರ ತಂದೆ ಶಿವಗೊಂಡ ಕಾಲುನಡಿಗೆಯಿಂದ ಕೇದಾರನಾಥಕ್ಕೆ ಹೋಗಿ ದರುಶನ ಪಡೆದುದಕ್ಕಾಗಿ ಈತನಿಗೆ ಕೇದಾರಪ್ಪ ಎಂಬ ಹೆಸರಿನಿಂದಲೂ ಕರೆಯುತ್ತಿದ್ದರು. ತಾಯಿ ಗಂಗಾಂಬೆ (ರತ್ನಾಂಬ ಎಂತಲೂ ಎನ್ನುತ್ತಿದ್ದರು) ಇವರು ಮೂಲತಃ ಮದನೂರಿನವರು ಅಂದರೆ ಈಗಿನ ''ಚಿದ್ರಿ ಗ್ರಾಮದವರು ಎನ್ನಲು ಅನೇಕ ಗಟ್ಟಿಯಾದ ಸಾಕ್ಷಿಗಳಿವೆ. ಇಂದಿನ ಚಿದ್ರಿಯಲ್ಲಿ ಬೊಮ್ಮಗೊಂಡನ ಬಗ್ಗೆ ಅಭಿಮಾನವುಳ್ಳ ಗೊಂಡರ ಸಂಖ್ಯೆ ೫೦೦ ಕ್ಕೂ ಮಿಕ್ಕಿದ್ದು ಸುಮಾರು ನೂರು ಕುಟುಂಬಗಳಿವೆ. ಚಿದ್ರಿಯ ನರಸಗೊಂಡನ ಮಗ ನಾಗಪ್ಪ ಪೋಲಿಸನಾಗಿದ್ದ. ಆತನು ಆಧ್ಯಾತ್ಮ ಜೀವಿಯಾಗಿದ್ದು ಬೊಮ್ಮಗೊಂಡನ ಚರಿತ್ರೆ ಸಂಗ್ರಹಿಸುತ್ತ ಅವರ ಒಂದು ಚಿತ್ರ ಪ್ರಪ್ರಥಮವಾಗಿ ಗೊಂಡರಿಗೆ ಪರಿಚಯಿಸಿದರು. ಹಲವರ ಅಭಿಪ್ರಾಯದ ಪ್ರಕಾರ ದಿವಂಗತ ಪೋಲಿಸ್ ನಾಗಪ್ಪನು ಬೊಮ್ಮಗೊಂಡನ ವಂಶಜರಲೊಬ್ಬ ಎನ್ನುವರು. ಬೊಮ್ಮಗೊಂಡನು ನಾಗವಂಶಿಯ ಗೊಂಡನಾಗಿರಬಹುದು. ಬೀದರ ಜನತೆಯಲ್ಲಿ ಇಂದಿಗೂ ಒಂದು ನಾಣ್ಣುಡಿ ಚಿದ್ರಿ ಗ್ರಾಮದ ಬಗ್ಗೆ ಹೀಗಿದೆ 'ಪಹಲೆ ಚಿದ್ರಿ ಬಾದ ಬಿದ್ರಿ, ಸುದ್ರಿ ತೊ ಸುದ್ರಿ ನಹಿತೋ ಉಧರಿ' ಕನ್ನಡಾನುವಾದ ಮೊದಲು ಚಿದ್ರಿ, ಅನಂತರ ಬಿದರಿ, (ಬೀದರ) ಸುಧಾರಿಸಿದರೆ ಸುಧಾರಿಸಿತು ಇಲ್ಲದಿದ್ದರೆ ಇಲ್ಲ, ಈ ನಾಣ್ಣುಡಿಯಲ್ಲಿಯೇ ಬೀದರಿಗಿಂತ ಚಿದ್ರಿ ಹಳೆಯದೆಂದು ಸೂಚಿಸುತ್ತಿದೆ.''[೪] ಇಂದಿನ ಬೀದರ ಅಂದು ಕಾಡಿನಿಂದ ಕೂಡಿರಬೇಕು ಇದಲ್ಲದೇ ಬೊಮ್ಮಗೊಂಡನ ಒಟ್ಟು ಕಾರ್ಯ ಕ್ಷೇತ್ರ ಈ ಬೀದರ ಜಿಲ್ಲೆಯೇ ಆಗಿದೆ. ಅದರಲ್ಲೂ ಬೀದರ ತಾಲ್ಲೂಕಿನ ಮುಖ್ಯವಾಗಿ ಕೋಟೆ ಸುತ್ತ ಮುತ್ತಲಿರುವ ಸಣ್ಣ ಪುಟ್ಟ ಹಳ್ಳಿಗಳಲ್ಲಿಯೇ ಈತನ ನೆಲೆಯನ್ನು ಇಂದಿಗೂ ನಾವು ನೋಡಬಹುದಾಗಿದೆ.

ಬೊಮ್ಮಗೊಂಡ ಬಾಲ್ಯದಲ್ಲಿರುವಾಗ ಅಕಾಲ ಬರಬಿದ್ದ ಕಾರಣ ನೀರು ಅರಸುತ್ತ ಚಿದ್ರಿ ಗ್ರಾಮವನ್ನು ಬಿಟ್ಟು ಬೀದರಕ್ಕೆ ಬಂದನು ಅಲ್ಲಿಯೇ ವಾಸಿಸಲು ಪ್ರಾರಂಭಿಸಿದನು. ಮೇಲಿಂದ ಮೇಲೆ

---

**ಅಡಿ ಟಿಪ್ಪಣಿ :**

೩. 'ಬುಡಕಟ್ಟು ಕುಲ ಕಸಬುಗಳು' ಡಾ|| ಕೆ.ಎಂ. ಮೈತ್ರಿ, ಪು.೬೪.

೪. 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂ. ಎಚ್.ಸಿ.ಶಿವಕುಮಾರ, ಪು.೧೯

ಬೀಳುತಿದ್ದ ಅಕಾಲ ಬರದಿಂದಾಗಿ ಎಲ್ಲೆಲ್ಲೂ ನೀರು ದೊರೆಯದಾಯಿತು. ಈಗಿನ ಕೋಟೆಯೊಳಗಡೆ ಇರುವ ವೀರಸಂಗಯ್ಯ ದೇವಸ್ಥಾನದ ಬಳಿ ಕುರಿಗಳನ್ನು ಮೇಯಿಸತೊಡಗಿದನು.

''ಜಾತಿಯಲ್ಲಿ ಗೊಂಡನಾದರೂ ಧಾರ್ಮಿಕ ಮನೋವೃತ್ತಿಯವರಾದ ಬೊಮಗೊಂಡರು, ಸದಾ ಧರ್ಮ, ದೇವರು ಕುರಿತು ಹೆಚ್ಚು ಒಲವನ್ನು ತಾಳುವವನಾಗಿದ್ದನು. ವೀರ ಸಂಗಯ್ಯನ ಗದ್ದುಗೆಗೂ ಸೇವೆ ಮಾಡುತ್ತ ಅವನನ್ನೂ ಆರಾಧ್ಯ ದೈವ ಹಾಗೂ ಅಪ್ರತ್ಯಕ್ಷ ಗುರುವಾಗಿಸಿಕೊಂಡು ಜೀವನ ನಡೆಸಿದನು. ಒಂದು ದಿನ ಮನುಷ್ಯ ಪ್ರಾಣಿ, ಪಶು, ಹಕ್ಕಿ ಮುಂತಾದವುಗಳು ನೀರಿಲ್ಲದೆ ಹಾಹಾಕಾರ ಮಾಡುವಂಥ ಸಂಧರ್ಭದಲ್ಲಿ ಬೊಮ್ಮಗೊಂಡನು ಚಿಂತೆಗೊಳಗಾಗಿ ವೀರ ಸಂಗಯ್ಯನ ಸಮಾಧಿಗೆ ತಲೆಯಿಟ್ಟು ಮಲಗಲು ಕನಸಿನಲ್ಲಿ ವೀರ ಸಂಗಯ್ಯ ಪ್ರತ್ಯಕ್ಷನಾಗಿ ಸಮೀಪದಲ್ಲೆ ಇರುವ ನೀರಿನ ಬುಗ್ಗೆಯೊಂದು ತೋರಿಸಿದ ಬೊಮ್ಮಗೊಂಡ ಆ ಬುಗ್ಗೆಯ ನೀರನ್ನು ಪ್ರಾಣಿಗಳಿಗೂ, ಮನುಷ್ಯರಿಗೂ ಸಿಗುವಂತೆ ಮಾಡಿದನು.''[೫] ಎಂದು ಇಲ್ಲಿಯ ಜನಪದರು ಹೇಳುತ್ತಾರೆ. ಮುಂದೊಂದು ದಿನ ಸಮೀಪದಲ್ಲೇ ಇರುವ ಕಾಳಿಕಾದೇವಿಯ ಮಂದಿರದಲ್ಲಿ ಪರುಷದ ಬೊಂಬೆಗಾಗಿ ತಪಸ್ಸು ಮಾಡುತ್ತಿದ್ದ ಕುಟಿಲ ಸನ್ಯಾಸಿಯನ್ನು ನಿರ್ನಾಮ ಮಾಡಿದ ಸ್ವತಃ ಕಾಳಿಕಾದೇವಿಯೇ ಇವರ ನಿಷ್ಕಲ್ಮಷ ಮನಸ್ಸು ನೋಡಿ ಪರುಷಗೊಂಬೆಯನ್ನೇ ಇವನಿಗೆ ಕೊಟ್ಟಳೆಂಬುದು ಕಥೆ ಹೇಳುತ್ತಾರೆ. ಅಷ್ಟೇ ಅಲ್ಲ ನೀರಡಿಸಿ ಬಂದ ಸುಲ್ತಾನನಿಗೆ ಚಿಕ್ಕ ಬುಗ್ಗೆಯಿಂದಲೇ ನೀರು ಕುಡಿಸಿ ಕಾಣಿಕೆ ಪಡೆಯುವುದರ ಮೂಲಕ ತನ್ನ ಜನಾಂಗಕ್ಕೆ ಮಹದುಪಕಾರ ಮಾಡಿದರು. ತನ್ನಲ್ಲಿರುವ ಪರುಷ ಬೊಂಬೆಯ ನಿಧಿಯನ್ನು ಸುಲ್ತಾನನಿಗೆ ಕೋಟೆ ನಿರ್ಮಾಣಕ್ಕಾಗಿ ಕೊಟ್ಟರು ಎಂಬ ನಾನಾ ರೀತಿಯ ಕಥೆಗಳು ಬೀದರ ಜಿಲ್ಲೆಯಲ್ಲಿ ಕೇಳಸಿಗುತ್ತವೆ.

ಬೊಮ್ಮಗೊಂಡೇಶ್ವರನ ಕುರಿತು ತಿಳಿಸುವ ಏಕೈಕ ಲಿಖಿತ ಗಟ್ಟಿ ಆಧಾರವೆಂದರೆ ಅದು 'ಸುಲ್ತಾನ ಸುರಳಿ' ಇದನ್ನು ಬಿಟ್ಟಿಯೂ ಜನಪದರು ಹೇಳುವ ಕಥೆ, ಐತಿಹ್ಯ , ಹಾಡು, ವಚನ ಮುಂತಾದವುಗಳನ್ನು ಹೆಕ್ಕಿ ತೆಗೆದು ಇವರ ಜೀವನದ ಪರಿಚಯವನ್ನು ಮಾಡಿಕೊಳ್ಳಬಹುದಾಗಿದೆ. 'ಸುಲ್ತಾನ ಸುರಳಿ'ಯಲ್ಲಿ ಬೊಮ್ಮಗೊಂಡನ ಕುರಿತಂತೆ ದೀರ್ಘ ಪ್ರಸ್ತಾಪ ಬಂದಿರುತ್ತದೆ. ಇದೊಂದು ಗಟ್ಟಿಯಾದ ಆಕರ ಸಾಮಗ್ರಿಯೆಂದೇ ಹೇಳಬಹುದು. ಜೊತೆಗೆ 'ಬೀದರ ಜಿಲ್ಲೆಯ ಜನಪದ ಕಥೆಗಳು' ಸಂ. ಕ್ಯಾಥನಳ್ಳಿ ರಾಮಣ್ಣ, ಕನಕ ಸ್ಮರಣ ಸಂಚಿಕೆ 'ಧರೆಗಿಳಿದು ಬಾ' ಸಂ. ಚಂದ್ರಕಾಂತ ವಗ್ಗಯ್ಯ (೧೯೮೯), 'ಕನಕ ಸ್ಫೂರ್ತಿ' ಮಾಸ ಪತ್ರಿಕೆ ಸಂ. ಎಚ್.ಸಿ.ಶಿವಕುಮಾರ, 'ಶರಣ ಸೌರಭ' ಸ್ಮರಣ ಸಂಚಿಕೆ ಸಂ. ಪಂಚಾಕ್ಷರಿ ಪುಣ್ಯಶೆಟ್ಟಿ (ಬೀದರ : ಕನ್ನಡ ಸಾಹಿತ್ಯ ಪರಿಷತ್ತು೧೯೯೧), 'ಬೀದರ ಜಿಲ್ಲಾ ದರ್ಶನ' ಸಂ. ಡಾ॥ ಜಗನ್ನಾಥ ಹೆಬ್ಬಾಳೆ, 'ಬೊಮ್ಮಗೊಂಡೇಶ್ವರನ ಪವಾಡಗಳು' ಲೇ. ಮಾಳಪ್ಪ ಅಡಸಾರೆ ಮುಂತಾದವುಗಳು ಬೊಮ್ಮಗೊಂಡೇಶ್ವರನ ಕುರಿತು ಮಾಹಿತಿಯನ್ನು ಒದಗಿಸುತ್ತವೆ.

ಬೊಮ್ಮಗೊಂಡೇಶ್ವರನು ಗುರು ಹಾಗೂ ಶಿಷ್ಯರನ್ನು ಹೊಂದಿದ್ದರು. ಇವರಿಂದ ರಚಿತವಾದ ವಚನವೊಂದರಲ್ಲಿ ಗುರು ವೀರಸಂಗಯ್ಯನ ಪ್ರಭಾವಿ ವ್ಯಕ್ತಿತ್ವವನ್ನು ವರ್ಣಿಸಿದ್ದನ್ನು ನೋಡಬಹುದು. ವೀರ ಸಂಗಯ್ಯನ ಪ್ರಭಾವಿ ವ್ಯಕ್ತಿತ್ವ ನಿದರ್ಶನದ ವರ್ಣನೆ ಹೀಗೆ ಇದೆ.

---

**ಅಡಿ ಟಿಪ್ಪಣಿ :**

೫. ಶಾಂತಲಿಂಗ ಸ್ವಾಮಿ (೬೨) ಲಾಡಗೇರಿ, ಬೀದರ.

''ಶ್ರೀ ಗುರು ವೀರಸಂಗಯ್ಯನ ಬಣ್ಣಿ
ಬಣ್ಣಿಸುವದೆಂತು ಸಾಧ್ಯವೋ!
ಸೂಳೆಯ ಮನೆಯಲ್ಲುಂಡು ಅವಳ
ದೀಕ್ಷೆಯ ಗೈದು ಶಿವಶರಣೆಯನ್ನಾಗಿ ಮಾಡಿದ ।
ಕಾಟುಗನ ಮನೆಯಲ್ಲುಂಡು ಅವನ
ಜಂಗಮ ದಾಸೋಹಿಯಾಗಿ ಮಾಡಿದ ।
ವೈರಿ ಭಾಸ್ಕರಂಗೆ ಜಂಗಮ ದೀಕ್ಷೆಯ ತೆತ್ತು
ಮೈದುನನ್ನಾಗಿ ಮಾಡಿಕೊಂಡ ।
ಮೃತಪಟ್ಟವಂಗೆ ಮರಳಿ ಪ್ರಾಣವ ತೆತ್ತಿದ
ಪರುಷದ ಪುತ್ಥಳಿ ಪತಿತಪಾವನ ಮೂರ್ತಿ
ಶ್ರೀ ಗುರು ವೀರ ಸಂಗಯ್ಯನ ಶ್ರೀ ಪಾದಕ್ಕೆ
ನಮೋ ನಮೋ ಎಂದು ಬದುಕಿದೆನು ಬಸವಣ್ಣ ॥

ಬೊಮ್ಮಗೊಂಡೇಶ್ವರನು ವೀರ ಸಂಗಯ್ಯನ ಬಗ್ಗೆ ಎಷ್ಟೊಂದು ಪೂಜ್ಯ ಭಾವನೆ ಹೊಂದಿದ್ದನೆಂಬುದಕ್ಕೆ ಈ ಮೇಲಿನ ವಚನವೇ ಸಾಕ್ಷಿ''[೬] ಈ ವಚನ ವೀರ ಸಂಗಯ್ಯನು ಎಸಗಿದ ಕಾರ್ಯಗಳ ಕುರಿತು ಸಾಕ್ಷಿಯನ್ನು ಒದಗಿಸುತ್ತದೆ.

ಬೊಮ್ಮಗೊಂಡೇಶ್ವರನ ವಚನಾಂಕಿತದಲ್ಲಿ ಬರುವಂಥ ವೀರ ಸಂಗಯ್ಯನ ಚರಿತ್ರೆ ವಿಶಿಷ್ಟವಾಗಿದೆ. ''ವೀರಸಂಗಯ್ಯ ಶರಣರ ಜನ್ಮ ಸ್ಥಳವಾದ ಶಿವಪೂರ (ಗದ್ದುಗೆಕೇರಿ) ಅದು ಇಂದು ಲಾಡಗೇರಿ ಎಂಬ ನಾಮದಿಂದ ಇಂದು ಬಡಜನಗಳ ವಸತಿಯಾಗಿದೆ. ವೀರಸಂಗಯ್ಯ ಶರಣರು ಮಾಡುವ ಪೂಜಾ, ಜಪ, ಧ್ಯಾನದ ಕೋಣೆಯು ಇಂದು ಸಂಗಮೇಶ್ವರ ಮಂದಿರವಾಗಿ ಕಂಗೊಳಿಸುತ್ತಿದೆ. ಅಲ್ಲಿ ಭಕ್ತಾದಿಗಳು ದರ್ಶನಕ್ಕೆ ಬರುತ್ತಾರೆ. ವೀರಸಂಗಯ್ಯ ಶರಣರ ಆಚಾರ ನಿಷ್ಠೆ ಜಗತ್ತಿಗೆ ನಿಜವಾಗಿಯೂ ಮಾರ್ಗದರ್ಶನ ಮಾಡುತ್ತದೆ. ಈತನ ಚರಿತ್ರೆಯು ಜಗನ್ಮಾನ್ಯವಾಗಿದೆ. ಕಲ್ಯಾಣ ಬಸವೇಶಾದಿ ಅನೇಕ ಶರಣರು ಈತನನ್ನು ಕೊಂಡಾಡಿದ್ದಾರೆ. ಬೊಮ್ಮಗೊಂಡೇಶ್ವರನೆಂಬ ಶಿಷ್ಯನು ಬಹಮನಿ ಅರಸರ ಕಾಲಕ್ಕೆ ಬಹು ಪ್ರಸಿದ್ಧನಾಗಿದ್ದಾನೆ. ಈತನಿಂದ ಸಂಗಯ್ಯನ ಕೀರ್ತಿ ಸುಪ್ರಚಾರವಾಯಿತು. ಮುಂದೆ ಅನೇಕ ಕವಿಗಳು ಪುರಾಣ, ಕಾವ್ಯ, ಗದ್ಯಗಳಲ್ಲಿ ಹೊಗಳಿದ್ದಾರೆ. ಈತನ ಕೀರ್ತಿ ಅಜರಾಮರವಾಗಿದೆ. ಇವರ ಚರಿತ್ರೆ ಶರಣರ ಶ್ರೇಣಿಯಲ್ಲಿ ಅಗ್ರಸ್ಥಾನ ಪಡೆದಿದೆ.''[೭] ಎಂಬುದು ಗೊತ್ತಾಗುತ್ತದೆ. 'ಚಂದ್ರಾಣಿ ಪರಿಣಯ' ಎಂಬ ಕೃತಿಯಲ್ಲಿ ವೀರ ಸಂಗಯ್ಯನನ್ನು ಹೊಗಳುತ್ತ ಆತನ ಸಮಕಾಲಿನ ಅರಸನನ್ನು ಹಾಗೂ ಬೊಮ್ಮಗೊಂಡೇಶ್ವರ ಮತ್ತು ಸುಲ್ತಾನ ಸುರಳಿ ಕುರಿತು ಪ್ರಸ್ತಾಪವನ್ನು ಈ ಕೆಳಗಿನ ಪದ್ಯದಲ್ಲಿ ಮಾಡಿದ್ದನ್ನು ನೊಡಬಹುದಾಗಿದೆ.

---

ಅಡಿ ಟಿಪ್ಪಣಿ :

೬. 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂ. ಎಚ್.ಸಿ.ಶಿವಕುಮಾರ, ಪು.೧೬.
೭. 'ವೀರಸಂಗಯ್ಯನವರ ಭಜನೆ' ಶಾಂತಲಿಂಗ ಸ್ವಾಮಿ, ಪು.೧೦.

''ವೀರಮಣಿ ಪತಿವ್ರತಾ ಶಿರೋಮಣಿ
ಚಂದ್ರಮಣಿ ಕಾ ಶುಭ ಪರಿಣಯ ಹುವಾ
ವೀರ ಸಂಗಯ್ಯ ಜೋ ಥಾ
ಜಂಗಮ ಪ್ರಾಣಿ ಸಹೃದಯ (ಪದ್ಯ ೫)

ಇನಕಾ ಪರಿಚಯ ಬೊಮಗೊಂಡಾನೆ
ಸುಲ್ತಾನ ಸುರಳಿ ಮೇ ಬತಾದಿಯಾ
ವೀರಸಂಗಯ್ಯ ಧರ್ಮ ಪರಾಯಣ
ಬೀದರ ಕೆ ನೃಪ ಕಹಾ ಗಯಾ (ಪದ್ಯ ೬)

ದಕ್ಷಿಣ ಭಾರತ ಬೀದರ ಮೇ
ವೀರ ಸಂಗಯ್ಯಾ ಕಿ ಹುಕುಮತ ಥಿ
ಹೈ ವೀರಶೂರ ವೀರಶೈವ ಶಿರೋಮಣಿ
ಐಸೀ ಉನಕಿ ಕೀರ್ತಿ ಥಿ (ಪದ್ಯ ೧೦)'[೮]

ವೀರಸಂಗಯ್ಯ ಹಾಗೂ ಬೊಮ್ಮಗೊಂಡನ ಕಾಲದಲ್ಲಿ ಅಜಗಜಾಂತರ ವ್ಯತ್ಯಾಸ ಕಂಡು ಬರುತ್ತದೆ. ಆದರೂ ತನ್ನ ವಚನಗಳ ಅಂಕಿತವನ್ನು ಗುರು ವೀರಸಂಗಯ್ಯ ಎಂದಿದ್ದು ಕೊನೆಯಲ್ಲಿ ಬಸವಣ್ಣ ಎಂದಿದೆ. ಇದರಿಂದ ಬೊಮ್ಮಗೊಂಡ ವೀರಸಂಗಯ್ಯನ ವ್ಯಕ್ತಿತ್ವದಿಂದ ಪ್ರಭಾವಗೊಂಡಂತೆ ತೋರುತ್ತದೆ. ಬೊಮ್ಮಗೊಂಡ ಗುರುವನ್ನು ಹೊಂದಿರುವಂತೆ ಗಾಣಿಗೇರ ಸಿದ್ದಪ್ಪನೆಂಬ ಶಿಷ್ಯನನ್ನು ಹೊಂದಿದ್ದ ಎಂಬುದು ಗಮನಕ್ಕೆ ಬರುತ್ತದೆ. ಈತನು ಕೂಡ ಅನೇಕ ವಚನಗಳನ್ನು ರಚಿಸಿದ್ದ ಎನ್ನಲಾಗುತ್ತದೆ. ಈತ ಬೊಮ್ಮಗೊಂಡೇಶ್ವರ ಮಾರ್ಗದರ್ಶನ ಪಡೆದು ಅವರ ಕುರಿತು ಹೀಗೆ ವಚನ ರಚಿಸಿರುತ್ತಾನೆ -

''ಬೀದರೂರು ಪಟ್ಟಣದೊಳಗ ಶಿವಶರಣ
ಮಹಾತ್ಮ ಬೊಮಗೊಂಡೇಶ್ವರರ
ಮಹಿಮೆ ಎಣಿಸುವುಕ್ಕಾವ
ಗಣನೆಯಿಲ್ಲ ॥

ಆದಿ, ಮಧ್ಯ, ಅಂತ್ಯಗಳ ತ್ರಿಕಾಲಜ್ಞಾನಿ
ವೇದ, ಶಾಸ್ತ್ರ ಪುರಾಣಾಗಮ,
ಉಪನಿಷತುಗ್ತಳ ಗಂಗೋತ್ರಿ ॥

ಹದಿನೆಂಟು ಪುರಾಣಗಳು ಬೆರಳಕ್ಷರ
ಜ್ಯೋತಿಷ್ ಶಾಸ್ತ್ರಸಂಜ್ಞೆಯಲ್ಲಿ ॥

---

**ಅಡಿ ಟಿಪ್ಪಣಿ :**

೮. ಬಸವಲಿಂಗ ಶಾಸ್ತ್ರಿ ಹಣೆಗಾಂವರ 'ಚಂದ್ರುಣ ಪರಿಣಯ' ಕೃತಿಯಿಂದ ಶಾಂತಲಿಂಗ ಸ್ವಾಮಿ (೬೨) ಲಾಡಗೇರಿಯವರು ಕೈಬರಹದ ರೂಪದಲ್ಲಿ ಸಂಗ್ರಹಿಸಿದ್ದು.

ಹಣಿಯೊಳಗೆ ಬರೆದ ಬ್ರಹ್ಮಾಂಡ ಜ್ಞಾನ
ಹಣಿಯ ಮೇಲೆ ವಿಭೂತಿ ॥
ಕೊರಳಿಗೆ ಲಿಂಗ ರುದ್ರಾಕ್ಷಿ
ನುಡಿಯೊಳಗೆ ಶಿವಮಂತ್ರ ॥
ಹಸ್ತದೊಳಗೆ ಡಮರುಗದಂಡ
ಭುಜಕ್ಕೆ ಕಂಬಳಿ, ದಾಸೊಹ ಪಾತ್ರೆ॥
ನಿಜಗುರು ಶಿವರೇವಣಸಿದ್ದೇಶ್ವರರ
ಮಹಾ ಶಿವಶರಣ ಶ್ರೀ ಮಹಾತ್ಮ
ಬೊಮಗೊಂಡೇಶ್ವರರ
ದರ್ಶನದಿಂದೆನ್ನ ಜನ್ಮ ಜನ್ಮಾಂತರದ
ಪಾಪವಡಗಿ
ಇಂದೆನ್ನ ಜನ್ಮ ಸಾರ್ಥಕವಾಯಿತು ॥'[೯]

ಬೊಮ್ಮಗೊಂಡೇಶ್ವರನ ವ್ಯಕ್ತಿತ್ವ ಅರಿಯಲು ಈ ಮೇಲಿನ ಒಂದೇ ಒಂದು ವಚನ ಸಾಕಾಗುತ್ತದೆ. ಅವರ ಜ್ಞಾನದ ಆಳ ಅಗಲವನ್ನು ಶಿಷ್ಯನಾದ ಗಾಣಿಗೇರ ಸಿದ್ದಪ್ಪ ಸುಂದರವಾಗಿ ವರ್ಣಿಸಿದ್ದಾನೆ. ತನ್ನ ಸಮಕಾಲೀನನಾದ ಬೊಮ್ಮಗೊಂಡನನ್ನು ಮನಃಪೂರ್ವಕವಾಗಿ ಹೊಗಳಿದ್ದಾನೆ. ಸದಾ ಬೊಮ್ಮಗೊಂಡನ ಜೊತೆಯಲ್ಲೇ ಇರುತ್ತಿದ್ದ ಶಿಷ್ಯನು ಮೌಖಿಕವಾಗಿ ತನ್ನ ಹಾಗೂ ತನ್ನ ಗುರುವಿನ ವಚನಗಳನ್ನು ಹಳ್ಳಿ ಹಳ್ಳಿಗೆ ಹೋಗಿ ಪ್ರಚಾರ ಮಾಡುತ್ತಿದ್ದ. ಅಂತಲೇ ಸುಮಾರು ಮೂವತ್ತು-ಮೂವತ್ತೈದು ವರ್ಷಗಳ ಹಿಂದೆ ಪೊಲೀಸ್ ಇಲಾಖೆಯಲ್ಲಿದ್ದ ನಾಗಪ್ಪ ಚಿದ್ರಿ ಎಂಬುವವರು ಹಳ್ಳಿ ಹಳ್ಳಿಗಳಿಗೆ ಹೋಗಿ ವಚನಗಳನ್ನು ಸಂಗ್ರಹಿಸಿದ್ದಾರೆ. ಇದರ ಪ್ರತಿಫಲವಾಗಿಯೇ ಇಂದು ಅಲ್ಲಲ್ಲಿ ನಮಗೆ ಬೊಮ್ಮಗೊಂಡನ ಹಾಗೂ ಗಾಣಿಗೇರ ಸಿದ್ದಪ್ಪನ ವಚನಗಳು ಕೈಬರಹದಲ್ಲಿ ಸಿಗುತ್ತವೆ. ಇವರಿಬ್ಬರೊಳಗೊಂಡಂತಹ ಒಟ್ಟು ಇನ್ನೂರಕ್ಕೂ ಹೆಚ್ಚು ವಚನಗಳು 'ಶಾಂತಲಿಂಗ ಸ್ವಾಮಿ ಲಾಡಗೇರಿ' ಅವರ ಹತ್ತಿರ ಸದ್ಯದಲ್ಲಿ ಸಿಗುತ್ತವೆ. ಆದರೆ ಇವು ಅಚ್ಚಿನ ರೂಪದಲ್ಲಿರದೇ, ಕೈಬರಹದಲ್ಲಿವೆ. ಇವುಗಳನ್ನು ಪರಿಷ್ಕರಣೆ ಮಾಡುವಂತಹ ಸಾಹಸ ಇನ್ನೂ ಯಾರೂ ಮಾಡಿಲ್ಲ. ಬೊಮ್ಮಗೊಂಡೇಶ್ವರನ ವಚನವೊಂದು ಗಾಣಿಗೇರ ಸಿದ್ದಪ್ಪನ ಕುರಿತು ಸಂಬೋಧನಾ ರೂಪದಲ್ಲಿದೆ. ಅದೇಂದರೆ -

''ಎಲೆ ಗಾಣಿಗರ ಸಿದ್ಧ। ಕಾಲೊಳಗೆ ಎಣ್ಣೆ
ಹಿಂಡ್ಹಿಡಿ ತೆಗೆಯುವಂತೆ
ಹಿಂಡಿ ತೆಗೆ ನೀ ದುರ್ಗುಣವ।
ಶಾಪ ಕಡೆಗಾಯ್ತು। ಪಾಪಲೋಪವಾಯ್ತು।
ಓಂಕಾರ ನಾದ ಬಿಂದು ಒಂದಾದಂತೆ,

---
**ಅಡಿ ಟಿಪ್ಪಣಿ :**
೯. 'ಶರಣ ಸೌರಭ' ಸ್ಮರಣ ಸಂಚಿಕೆ, ಸಂ. ಪಂಚಾಕ್ಷರಿ ಪುಣ್ಯಶೆಟ್ಟಿ, ಪು. ೫೨.

ಲಿಂಗ ಲೀಲೆಯೊಳಗೆ ನೀನಾದೆ,
ಎಲ್ಲೋ ಸಿದ್ಧ ನಿನ್ನ ಉದ್ಧಾರ
ಮಾಡಿಕೊಂಡು ಆಗಿರುವೆ ಶುದ್ಧ
ಶ್ರೀ ಗುರುವೀರಸಂಗಯ್ಯನ ಪಾದದಲ್ಲಿ
ನೀನೆಂದೆಂದು ಪ್ರಬುದ್ಧ।[೧೦]

ಹೀಗೆ ಬೊಮ್ಮಗೊಂಡೇಶ್ವರನಿಗೆ ಗುರು ವೀರಸಂಗಯ್ಯಾ ಹಾಗೂ ಶಿಷ್ಯ ಗಾಣಿಗೇರ ಸಿದ್ದಪ್ಪ ಇದ್ದುದ್ದಾಗಿ ತಿಳಿದು ಬರುತ್ತದೆ. ಬೊಮ್ಮಗೊಂಡೇಶ್ವರನ ಚರಿತ್ರೆ ಕತ್ತಲಲ್ಲಿ ಮುಳಿಗಿರುವಾಗ ಬೆಳಕಿಗೆ ತಂದವರೆಂದರೆ ಬೊಮ್ಮಗೊಂಡನ ವಂಶಜರಾದ ದಿವಂಗತ ನಾಗಪ್ಪ ಚಿದ್ರಿಯವರು. ಇವರು ಬೀದರ ಜಿಲ್ಲೆಯ ತುಂಬ ಅಲೆದಾಡಿ ಬೊಮ್ಮಗೊಂಡನ ವಚನಗಳನ್ನು ಸಂಗ್ರಹಿಸಿದರಲ್ಲದೇ, ಬೊಮ್ಮಗೊಂಡೇಶ್ವರನೆಂಬ ಮಹಾತ್ಮ ಪುರುಷ ನಮ್ಮ ಬುಡಕಟ್ಟಿನವನೇ ಎಂದು ಅವನ ಪವಾಡಗಳನ್ನು, ಕಥೆಗಳನ್ನು ಹಿರಿಯರಿಂದ ಕೇಳಿ ಪಡೆದು ಇತರರಿಗೂ ಹೇಳಿದರು. ತನ್ನ ಇಡೀ ಜೀವಮಾನವನ್ನು ಗೊಂಡ ಬುಡಕಟ್ಟಿನ ಸಂಘಟನೆಗಾಗಿಯೇ ಸವೆಸಿದರು.

ಮಹಾತ್ಮ ಬೊಮ್ಮಗೊಂಡೇಶ್ವರನದು ಅತ್ಯಂತ ಸರಳ ಜೀವನ, ತ್ಯಾಗದ ಭಾವನೆ, ಸಮಾಜಕ್ಕೆ ಇವರ ಅಪಾರ ಕೊಡುಗೆಯನ್ನು ಅರ್ಥಮಾಡಿಕೊಂಡು ಪೊಲೀಸ್ ಇಲಾಖೆಯಲ್ಲಿ ಇದ್ದರೂ ಧರ್ಮ ಪ್ರಚಾರ ಹಾಗೂ ಬೊಮ್ಮಗೊಂಡೇಶ್ವರನ ಸಾಹಸದ ಬಗ್ಗೆ ಜನತೆಗೆ ಹೇಳುವುದರ ಮೂಲಕ ಪ್ರತಿ ಹಳ್ಳಿ ಹಳ್ಳಿಗೆ ಇವರ ಹೆಸರು ಪರಿಚಿತವಾಗಿದೆ. ಇವರೇ ನಾಗಪ್ಪ ಚಿದ್ರಿಯವರು.

ಒಂದು ದಿವಸ ದಿವಂಗತ ನಾಗಪ್ಪನವರ ಕನಸಿನಲ್ಲಿ ಬೊಮ್ಮಗೊಂಡೇಶ್ವರನು ಬಂದಿದ್ದಕ್ಕೆ ಬೊಮ್ಮಗೊಂಡೇಶ್ವರ ಪ್ರಚಾರ ಕಾರ್ಯ ಹಾಗೂ ಗುಡಿ ಗುಂಡಾರ ಕಟ್ಟಲಿಕ್ಕೆ ಮಾರ್ಗದರ್ಶನ ಹಳ್ಳಿ ಹಳ್ಳಿಗೆ ಮಾಡಿದವರಲ್ಲಿ ಮೊದಲಿಗರು. ನಾಗಪ್ಪನವರು ಬೊಮ್ಮಗೊಂಡೇಶ್ವರನ ಪರಮಭಕ್ತರು. ರಾತ್ರಿ ಹಗಲು ಇವರ ನಾಮಸ್ಮರಣೆಯಲ್ಲಿರುತ್ತಿದ್ದರು. ನಾಗಪ್ಪನವರ ಹಸ್ತದಿಂದ ನೆರವೇರಿಸಿದ ಬೊಮ್ಮಗೊಂಡೇಶ್ವರನ, ಬೀರಗೊಂಡೇಶ್ವರರ ಇತ್ಯಾದಿ ಅಡಿಗಲ್ಲು ಈ ಮಂದಿರವಾಗಿರುವುದನ್ನು ಕಾಣುತ್ತೇವೆ.

ನಾಗಪ್ಪನವರು ಬೀದರ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಚಿದ್ರಿ ಗ್ರಾಮದಲ್ಲಿ ಜನಿಸಿದರು. ಇವರು ಪೊಲೀಸ್ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಲೇ ಕುರಿ ಕಾಯುವವರ ಹತ್ತಿರ ಹೋಗಿ ಬೊಮ್ಮಗೊಂಡೇಶ್ವರನ ಸಾಹಸದ, ತ್ಯಾಗದ ಬಗ್ಗೆ ಜನರಿಗೆ ವಿಚಾರ ಹೇಳುತ್ತಾ ತನ್ನ ಸರಳ ಜೀವನ ಸಾಗಿಸಿದರು. ಬೊಮ್ಮಗೊಂಡೇಶ್ವರನ ಸತ್ಸಂಗದ ತತ್ವಗಳನ್ನು ಹೇಳುತ್ತಾ ಪ್ರತಿ ಹಳ್ಳಿಹಳ್ಳಿಗಳಿಗೂ ಹೋಗಿ ಬೊಮ್ಮಗೊಂಡೇಶ್ವರನ ವಾಣಿಯನ್ನು ಸಾರಿದರು. ಜನತೆಗೆ ಜಾಗೃತ ಮಾಡಿದರು.

ಇಂದು ಬೀದರ ಹಾಗೂ ಅದಕ್ಕೆ ಹತ್ತಿಕೊಂಡ ಆಂಧ್ರ ಮತ್ತು ಮಹಾರಾಷ್ಟದ ಕೆಲವು ಗ್ರಾಮಗಳಲ್ಲಿ ಬೊಮ್ಮಗೊಂಡೇಶ್ವರನ ಕುರಿತು ಕಥೆ ಹೇಳುವವರು ಅನೇಕ ಜನ ಸಿಗುತ್ತಾರೆ. ಕಥೆ, ಐತಿಹ್ಯ, ಹಾಡು, ವಚನಗಳಿಂದ ಈತನ ಬದುಕನ್ನು ಗ್ರಹಿಸಲು ಸಾಧ್ಯವಿದೆ. ಇವುಗಳನ್ನು ಬಿಟ್ಟು ಲಿಖಿತ ಆಧಾರಗಳ

**ಅಡಿ ಟಿಪ್ಪಣಿ :**

೧೦. 'ಶರಣ ಸೌರಭ' ಸ್ಮರಣ ಸಂಚಿಕೆ, ಸಂ. ಪಂಚಾಕ್ಷರಿ ಪುಣ್ಯಶೆಟ್ಟಿ, ಪು. ೫೨-೫೩.

ಕಡೆ ಕಣ್ಣು ಹಾಯಿಸಿದಾಗ ಸಿಗುವ ಏಕೈಕ ಮಾಹಿತಿ ಎಂದರೆ ಅದು 'ಸುಲ್ತಾನ ಸುರಳಿ' ಇದರಲ್ಲಿ ಬೊಮ್ಮಗೊಂಡೇಶ್ವರನ ಕುರಿತ ಸ್ವಲ್ಪ ಪ್ರಸ್ತಾಪ ಮಾತ್ರ ಬಂದಿರುತ್ತದೆ.

**'ಸುಲ್ತಾನ ಸುರಳಿ'ಯಲ್ಲಿ ಬೊಮ್ಮಗೊಂಡೇಶ್ವರನ ಪರಿಚಯ :**

ಬೊಮ್ಮಗೊಂಡೇಶ್ವರ ಕುರಿತು ವ್ಯಕ್ತಿ ಮಾಹಿತಿಯನ್ನು ಹಾಗೂ ಗಟ್ಟಿ ಆಧಾರವನ್ನು ಒದಗಿಸಿ ಕೊಡುವುದೇ ಈ 'ಸುಲ್ತಾನ ಸುರಳಿ'. ಇದು ಮೂಲತಃ ಮರಾಠಿ ಭಾಷೆಯಲ್ಲಿ ಬೀದರಿನ ಒಬ್ಬ ಜಮೀನ್ದಾರನಿಂದ ಮೋಡಿ ಲಿಪಿಯಲ್ಲಿ ಬರೆಯಲ್ಪಟ್ಟ ಬಹಮನಿ ಸುಲ್ತಾನನ ಕಥನ ರೂಪದ ಐತಿಹಾಸಿಕ ದಾಖಲೆ. ಇದು ಒಟ್ಟು ಐದು ಜನ ಐತಿಹಾಸಿಕ ವ್ಯಕ್ತಿಗಳ ಕುರಿತು ಮಾಹಿತಿಯನ್ನು ಕೊಡುತ್ತದೆ. ಮರಾಠಿ ಭಾಷೆಯ ಈ ಸುರಳಿಯನ್ನು ಡಾ|| ಕೆ.ಎಂ. ಮೈತ್ರಿಯವರು ಕನ್ನಡಕ್ಕೆ ಅನುವಾದಿಸಿದ್ದಾರೆ. 'ಸುಲ್ತಾನ ಸುರಳಿ'ಯಲ್ಲಿ ಬರುವ ವ್ಯಕ್ತಿಗಳೆಂದರೆ -

೧. ಹಸನ್ ಗಂಗು ಬಹಮನಿ
೨. ಧನಗರ ರಾಜ ಬೊಮಗೊಂಡ
೩. ಅಜಮತ್ ಶಾಹ ಬಹಮನಿ
೪. ರಾಜಮಾನ್ಯ ಸಂಭಾಜಿ ಅನಂತ
೫. ಸಂತ ಖೋಜೇಜಿ

ಇವರಲ್ಲಿ ಎರಡನೇ ಪರಿಚಯ ಬರುವುದೇ 'ಧನಗರ ರಾಜ ಬೊಮಗೊಂಡ'ನದು. ''ಕಲಬುರ್ಗಿ (ಗುಲಬರ್ಗಾ) ದಿಂದ ಸುಲ್ತಾನ-ಎ-ಅಹಮದ್ ಶಾಹ ತನ್ನ ಸೈನ್ಯ ಸಮೇತವಾಗಿ ಭೇಟಿಯಾಡುತ್ತ ಬಿದಿರು ಘಟ್ಟ (ಬೀದರ) ಪ್ರದೇಶಕ್ಕೆ ತಲುಪಿದರು. ಅಲ್ಲಿಯ ಮೊಲಗಳನ್ನು ನೋಡಿ ಅವುಗಳ ಮೇಲೆ ಬೇಟೆ ನಾಯಿಗಳನ್ನು ಬೆನ್ನಟ್ಟಿಸಿದರು. ಆದರೆ ಆ ನಾಯಿಗಳಿಗೆ ಮೊಲಗಳು ಸುತ್ತುವರಿದು ಸಾಯಿಸಿದವು. ಇದನ್ನು ವೀಕ್ಷಿಸಿ, ಎಲ್ಲರೂ ಆಶ್ಚರ್ಯಚಕಿತರಾಗಿ ವಿಚಿತ್ರ ಘಟನೆಯೆಂದು ನುಡಿಯಲಾರಂಭಿಸಿದರು. ಮಂತ್ರಿ ಮುಖ್ಯಸ್ಥರನ್ನು ಕರೆಯಿಸಿ, ತಾನು ಕಂಡ ವಿಚಿತ್ರ ಘಟನೆ ಹೇಳಿ, ಇದೇನು ಮಹಿಮೆ! ಎಂದಾಗ ಗುಂಪು ಕೂಡಿದ ಜನರೆಲ್ಲ ಸುಲ್ತಾನ(ರಾಜ)ರೇ, ಇದು ಬೇಡರ್ ಭೂಮಿ (ಅಂಜಿಕೆಯಿಲ್ಲದ ಗಂಡು ಭೂಮಿ) ಮಹಿಮೆಯ ಭೂಮಿ, ಇಲ್ಲಿ ಒಂದು ಕೋಟೆ ಕಟ್ಟಬೇಕು ಎಂದು ವಿನಂತಿಸಿಕೊಳ್ಳುವಾಗ ಬಾದಶಹನು ಬೆಟ್ಟದ ಮೇಲಿನ ಮರಳಿನಲ್ಲಿ ಅಸುನೀಗಿದ್ದ ಬೇಟೆ ನಾಯಿಗಳನ್ನು ನೋಡಿ ತನ್ನ ಕುದುರೆಯ ಮೇಲೇರಿ ಸಾಯಿಸಿದ ಮೊಲಗಳನ್ನು ಬೆನ್ನಟ್ಟಿದರು. ಅವರ ಹಿಂದೆ ಮಂತ್ರಿಗಳು ಸೇನಾಧಿಪತಿಗಳು ಕಾಲಾಳುಗಳ ದಂಡು ಎಲ್ಲರೂ ಓಡಲಾರಂಭಿಸಿದರು. ಓಡಿ ಓಡಿ ಆಯಾಸವಾಗಿ ನೀರಡಿಕೆಯಿಂದ ನೀರು ಹುಡುಕಲಾರಂಭಿಸಿದರು. ಎಲ್ಲಿಯೂ ನೀರು ಕಾಣಲಿಲ್ಲ. ಆದರೆ ಅಲ್ಲಿ ಒಬ್ಬ ಧನಗರ (ಗೊಂಡ ಕುರಿಗಾಯಿ) ಕುರಿಗಳನ್ನು ಕಾಯುತ್ತಿದ್ದ, ಆತನನ್ನು ವಿಚಾರಿಸಿದಾಗ ಆತ ''ಇಲ್ಲಿ ನೀರಿಲ್ಲ ಒಂದು ಕುಂಡವಿದೆ ಆದರೆ ಇಷ್ಟೊಂದು ಸೈನ್ಯಕ್ಕೆ ನೀರು ಸಾಕಾಗಲಿಕ್ಕಿಲ್ಲ'' ಎಂದ. ಸರಿ ಆ ಕುಂಡ ಎಲ್ಲಿದೆ ಎಂದು ವಿಚಾರಿಸಿದಾಗ ಧನಗರ ರಾಜರು ಆಶ್ಚರ್ಯವನ್ನುಂಟು ಮಾಡಿತು. ಇಂತಹ ಘಟ್ಟ (ಬೆಟ್ಟಾರಣ್ಯ) ದಲ್ಲಿ ನೀರೆಲ್ಲಿರುವುದು? ಇದು ಧನಗರ ರಾಜರ ಮಹಿಮೆಯೇ ಸರಿ ಎನ್ನಲಾರಂಭಿಸಿದರು.

ಮಾರನೆಯ ದಿನ ಅಶ್ವದಳ, ಗಜದಳ, ಕಾಲಾಳು, ಸೈನ್ಯವೆಲ್ಲ ನೀರಿಗಾಗಿ ತುಂಬಾ ಶೋಧ ನಡೆಸಿ, ಸುಸ್ತಾಗಿ ಕೊನೆಗೆ ಧನಗರ ರಾಜರಿಗೆ ನೀರು ಕೇಳಿದಾಗ ಅವರು ಇಷ್ಟೊಂದು ಸೈನ್ಯಕ್ಕೆ ನೀರು ಸಾಲದು ಎನ್ನುತ್ತಿರಲು ಸರಿ, ಆ ಕುಂಡ ಎಲ್ಲಿದೆ? ನಮಗೆ ತೋರಿಸಿರೆಂದು ಅಂಗಲಾಚಿದರು. ಆಗ ಧನಗರ ರಾಜರು ಎಲ್ಲರಿಗೆ ಕುಂಡದ ಹತ್ತಿರ ಕರೆದೊಯ್ದು ತನ್ನ ಕೋಲಿನಿಂದ ಕುಂಡದ ಮೇಲೆ ಮುಚ್ಚಿರುವ ಕಲ್ಲು ಸರಿಸಿದರು. ಅದನ್ನು ನೋಡಿ ಎಲ್ಲರೂ ಅಚ್ಚರಿಪಟ್ಟು ಸಾಯಂಕಾಲದವರೆಗೆ ನೀರು ಕುಡಿದು ತೃಪ್ತರಾದರು. ಆ ಮೇಲೆ ಆ ಕುಂಡದ ಮೇಲೆ ಕಲ್ಲು ಮುಚ್ಚಿ ಧನಗರ ರಾಜರು ಅಲ್ಲಿಂದ ನಿರ್ಗಮಿಸಿದರು. ಮರುದಿನವೂ ಎಲ್ಲರೂ ನೀರು ಹುಡುಕುವುದರಲ್ಲಿ ಸುಸ್ತಾಗಿ ಕೊನೆಗೂ ಆ ಕುಂಡದ ಹತ್ತಿರ ಹೋಗಿ, ಮುಚ್ಚಿದ ಕಲ್ಲು ಎತ್ತಲಾರಂಭಿಸಿದರು. ಆನೆ, ಕುದುರೆ, ಸಶಕ್ತ ಪೈಲ್ವಾನ ಸೈನಿಕರಿಂದಲೂ ಕಲ್ಲು ಎತ್ತಲು ಆಗದಿದ್ದಾಗ, ಈ ವಿಷಯ ಬಾದಶಾಹರಿಗೆ ತಿಳಿಸಿದರು. ಬಾದಶಾಹರು ಪರಿಸ್ಥಿತಿ ಅರಿತುಕೊಂಡು ಧನಗರ ರಾಜರಿಗೆ ಕರೆತರಲು ಮಂತ್ರಿಗಳಿಗೆ ಆಜ್ಞಾಪಿಸಿದರು. ಆಜ್ಞೆಯಂತೆ ಮಂತ್ರಿಗಳು ಧನಗರ ರಾಜರಿಗೆ ಕರೆತಂದರು.

ಬಾದಶಾಹರು ಧನಗರ ರಾಜರಲ್ಲಿ ಎಲ್ಲರ ಪರವಾಗಿ ಹೀಗೆ ಭಿನ್ನವಿಸಿಕೊಂಡರು. ''ನಮ್ಮ ಜನರೆಲ್ಲ ನೀರಿಲ್ಲದೆ ನೀರಡಿಕೆಯಿಂದ ಬಳಲುತ್ತಿದ್ದಾರೆ. ತಾವು ಕುಂಡದ ಮೇಲಿನ ಕಲ್ಲು ತೆಗೆದರೆ ನಮ್ಮ ಜನರು ನೀರು ಕುಡಿದು ತಮಗೆ ಪುಣ್ಯ (ಆಶೀರ್ವಾದ) ಕೊಡುತ್ತಾರೆ. ದಯವಿಟ್ಟು ಕುಂಡದ ಮೇಲಿನ ಕಲ್ಲು ತೆಗೆದು ಪುಣ್ಯ ಕಟ್ಟಿಕೊಳ್ಳಿ'' ಎಂದಾಗ ಧನಗರ ರಾಜರು ತಮ್ಮ ಅರವತ್ತು ಎಪ್ಪತ್ತು ಸಶಕ್ತ ಪೈಲ್ವಾನರಿಂದ ಕುಂಡದ ಕಲ್ಲು ಸರಿಸಲು ಆಗದಿದ್ದಾಗ ಎನ್ನೊಬ್ಬನಿಂದ ಸಾಧ್ಯವೇ ಎಂದರು. ಬಾದಶಾಹರು ಆತ್ಮೀಯತೆಯಿಂದ ತಾವು ನಮಗೆ ನೀರು ಕುಡಿಸಲೇಬೇಕೆಂದು ಪರಿಪರಿಯಾಗಿ ಕೇಳಿದಾಗ, ಧನಗರ ರಾಜರು ಬಾದಶಾಹರಿಗೆ ನಮಸ್ಕರಿಸಿ, ಅವರೆಲ್ಲರಿಗೆ ಕುಂಡದ ಸಮೀಪ ಕರೆದೊಯ್ದು ತನ್ನ ವಂಕ (ಡೊಂಕ)ನ ಬಡಿಗೆಯಿಂದ ಕುಂಡದ ಮೇಲೆ ಮುಚ್ಚಿದ ಕಲ್ಲನ್ನು ಸರಿಸಿ, ತನ್ನ ಕುರಿ, ದನಗಳನ್ನು ಕಾಯುತ್ತ, ಮೇಯಿಸುತ್ತ ಹೋಗುವರು. ಆನೆ, ಕುದುರೆ, ಸೈನ್ಯವೆಲ್ಲಾ ನೀರು ಕುಡಿದು ತೃಪ್ತಿ ಹೊಂದಿದ್ದರೂ, ಸೈನ್ಯವೆಲ್ಲ ನೀರು ಕುಡಿದರೂ ಕುಂಡದ ನೀರು ಸರಿಯಲಿಲ್ಲ. ಕುಂಡದಲ್ಲಿ ಮೊದಲಿನಷ್ಟೆ ನೀರಿರುವ ವಿಷಯ ಬಾದಶಾಹರಿಗೆ ಮಂತ್ರಿಗಳು ತಿಳಿಸಿದಾಗ ಬಾದಶಾಹರು ಧನಗರ ರಾಜರಿಗೆ ಕರೆಯಿಸಿ, ಸಂತೋಷದಿಂದ ಆತಿಥ್ಯ ಸ್ವೀಕರಿಸಲು ಹೇಳಿ, ತಮ್ಮ ಹೆಸರೇನು? ಈ ಸ್ಥಳ ಯಾರದು? ತಾವೊಬ್ಬರೇ ಇಲ್ಲಿ ದನ ಕುರಿಗಳನ್ನು ಕಾಯುತ್ತೀರಿ, ನಮಗೇನು ತಿಳಿಯದು, ಎಲ್ಲ ಸತ್ಯಾಂಶ ತಿಳಿಹೇಳಿರಿ ಎಂದು ಕೇಳಿದಾಗ, ಅವರು ನನ್ನ ಹೆಸರು ಬೊಮ್ಮಗೊಂಡ, ಈ ಸ್ಥಳದಲ್ಲಿ ವೀರಸಂಗಯ್ಯಾ ಎಂಬ ಹಿಂದೂ ರಾಜರಿದ್ದರು. ಅವರು ಸಿದ್ಧಿ ಪುರುಷರಾಗಿದ್ದು ಪರಮೇಶ್ವರನ ಪರಮಭಕ್ತರಾಗಿದ್ದರು ಅವರು ಅಪಾರ ಮಹಿಮಾವಂತರಾಗಿದ್ದರು. ಅವರ ಕಾಲದಲ್ಲಿ ಭಾಲ್ಕಿಯಲ್ಲಿ ಚೌಳರಾವ, ಕೋಹಿರದಲ್ಲಿ ಭಾಸ್ಕರರಾವ, ಚಾಳಕಿಯಲ್ಲಿ ಚೋಳರಾವ, ಚಿಂಚೋಳಿಯಲ್ಲಿ ಸಿಂಧೂ ಬಲ್ಲಾಳರಾವ, ಮತ್ತು ಕಲ್ಯಾಣದಲ್ಲಿ ಬಿಜ್ಜಳರಾವರವರು ರಾಜರಿದ್ದರು. ಹೀಗೆ ಅಲ್ಲಲ್ಲಿ ಶಿವ ಭಕ್ತರು ಸುಖೀ ರಾಜ್ಯವಾಳುತ್ತಿದ್ದರು. ಎಲ್ಲರೂ ಐಕ್ಯರಾದರು. ಇಲ್ಲಿ ಹೇಳಲಿಕ್ಕಾಗದಷ್ಟು ದೊಡ್ಡ ದೊಡ್ಡ ದೇವಸ್ಥಾನಗಳಿದ್ದವು. ನಾನೊಬ್ಬ ಗೊಂಡ (ಕುರುಬ) ಕುರಿ ಕಾಯುತ್ತಾ ಬದುಕಿದ್ದೇನೆ. ತಾವೊಬ್ಬ ಬಾದಶಾಹ ಬಂದಿದ್ದಿರೆಂದು ಎಲ್ಲಾ ಸತ್ಯಾಂಶ ಹೇಳುತ್ತಿರುವೆ.

ಈ ಮಾತುಗಳನ್ನು ಕೇಳಿ ಬಹಳ ಸಂತೋಷಗೊಂಡು ಬೊಮ್ಮಗೊಂಡರಿಗೆ ಬಾದಶಾಹ ತನ್ನ ಸಮೀಪ ಕೂಡಿಸಿಕೊಂಡು ಮತ್ತೇ ಕೇಳಿದರು. ಈ ಭೂಮಿ (ಸ್ಥಳ) ಬಹಳ ಪುಣ್ಯಭೂಮಿಯಾಗಿದೆ. ಈ ಭೂಮಿಯ ಮೇಲೊಂದು ಕೋಟೆ ಕಟ್ಟಬೇಕೆಂದು ನನ್ನ ಮನಸ್ಸಿನಲ್ಲಿದೆ. ಅದಕ್ಕೆ ತಮ್ಮ ಮನಸ್ಸಿಗೆ ಹೇಗೆ ಅನ್ನಿಸುತ್ತದೆ ಎಂದಾಗ ಬೊಮ್ಮಗೊಂಡರು ನಾನೊಬ್ಬ ಕುರಿಗಾಯಿ ನನಗೇನು ಕೇಳುವಿರಿ. ಶೀಘ್ರವೇ ಕಟ್ಟಲು ಆರಂಭಿಸಿರಿ ಎಂದರು. ಬಾದಶಾಹರು ಸ್ಥಳ ನೋಡಿ ಕೋಟೆ ಕಟ್ಟಲಾರಂಬಿಸಿದರು. ತದನಂತರ ಮುಸ್ಲೀಮರು ಅದಕ್ಕೆ ''ಜಾಪರಾಬಾದ'' ಎಂದರೆ ಹಿಂದುಗಳು, ''ಬೀದರ ಕ್ವಾಟೆ'' ಎಂದು ಕರೆಯಲಾರಂಭಿಸಿದರು.

ಬೊಮ್ಮಗೊಂಡರು ಬಾದಶಾಹರಿಗೆ ಆ ಕುಮಡದ ಮೇಲೆ ಒಂದು ಕೆರೆ ಕಟ್ಟಿಸಿ ಅದರ ಹೆಸರು ಬೊಮ್ಮಗೊಂಡರ ಕೆರೆ ಎಂದಿಡಲು ಸಲಹೆ ಕೊಟ್ಟರು. ಆಗ ಬಾದಶಾಹರು ಕೋಟೆಯಲ್ಲಿ ಕೆರೆ ಕಟ್ಟಲು ಆರಂಭಿಸಿದರು. ಹಾಗೆಯೇ ಅದಕ್ಕೆ ಬೊಮ್ಮಗೊಂಡನ ಕೆರೆ ಎಂದು ಕರೆದರು. ಮೊದಲು ಆ ಕುಂಡದ ಹೆಸರು ವೀರಸಂಗಯ್ಯನ ಕುಂಡ ಎಂದಿದ್ದು, ಅಲ್ಲೊಂದು ದೊಡ್ಡ ದೇವಸ್ಥಾನವಿತ್ತಂತೆ, ಕೆರೆಯ ಮಧ್ಯದಲ್ಲಿ ಕುಂಡವಿದೆ. ಅದರ ಸುತ್ತಲೂ ಕೋಟೆ ಕಟ್ಟಲಾರಂಭಿಸಿದರು. ೧೨ ವರ್ಷಗಳವರೆಗೆ ಪ್ರತಿದಿನ ಮೂರು ಲಕ್ಷ ಹೊನ್ನು ಮಾರಿ ಕೊಟೆಯ ನಿರ್ಮಾಣಕ್ಕೆ ಹಣ ಖರ್ಚು ಮಾಡಿ, ಕೊಟೆ ಪೂರ್ಣಗೊಳಿಸಲಾಯಿತು. ರಾಜ್ಯವು ವಿಸ್ತಾರವಾಗಿ ಮಧ್ಯಬಾಲಘಾಟ, ಕಾಶಿ ರಾಮೇಶ್ವರದವರೆಗೆ ಹರಡಿತು. ಈ ಬಲಾಢ್ಯ ರಾಜರಿಗೆ ಹಸನ್ ಗಂಗು ಬಹಮನಿ ಬಾದಶಾಹ ಸುಲ್ತಾನ-ಎ-ಅಹಮದ್ ಶಾಹ ಎಂಬ ಹೆಸರಿಟ್ಟು ಕರೆಯಲಾರಂಭಿಸಿದರು.

ಪುಸ್ತಕಗಳಲ್ಲಿ ಸನದು ಪತ್ರಗಳಲ್ಲಿ ಈ ಹೆಸರೇ ಚಾಲ್ತಿಯಲ್ಲಿ ಮುಂದುವರೆಯಿತು. ಕೋಟೆಯ ಕಟ್ಟುವಿಕೆಯೂ ಮುಂದುವರೆಯಿತು. ಹೀಗೆ ಎರಡು ಮೂರು ತಲೆಮಾರಿನವರಿಗೆ ಅವರ ವಂಶಜರು ರಾಜಕೀಯ ಮಾಡಿದರು. ಪುತ್ರ ಸಂತಾನಾಭಿವೃದ್ಧಿಗೊಂಡಿತು. ಬಾದಶಹರು ಪೂರ್ವ ದಿಕ್ಕಿನಲ್ಲಿ ಗುಂಬಜ ಕಟ್ಟಿಸಲು ಆರಂಭಿಸಿದರು. ಅದಕ್ಕಾಗಿ ಪ್ರತಿನಿತ್ಯ ಒಂದು ಲಕ್ಷ ಹೊನ್ನುಮಾರಾಟ ಮಾಡಿ ಗುಂಬಜ ಕಟ್ಟುತ್ತಿದ್ದರು. ಗುಂಬಜ ತಯಾರಾಯಿತು. ಕಾಲಾಂತರದಲ್ಲಿ ಒಂದು ದಿನ ಬಾದಶಾಹರು ಶೋಭಾಯಾತ್ರೆಯ ತಯಾರಿ ಮಾಡಬೇಕೆಂದು ಆದೇಶವಿತ್ತರು. ಆದೇಶದಂತೆ ಶೋಭಾಯಾತ್ರೆ ಶೋಭಾಯಮಾನವಾಗಿ ಪಥಚಲನ ಮಾಡುತ್ತ ಗುಂಬಜದಲ್ಲಿ ಹೋಗಿ ಅದೃಶ್ಯವಾಯಿತು. ಈ ಅದ್ಭುತ ಚಮತ್ಕಾರಕ್ಕೆ ಮುಸ್ಲಿಮರು ಸುಲ್ತಾನ್-ಎ-ಅಹಮದ್ ಶಾಹ ಎನ್ನಲಾರಂಭಿಸಿದರೆ ಹಿಂದುಗಳು ಅಲ್ಲಮ ಪ್ರಭು ರೇವಣಸಿದ್ಧರೆಂದು ಎನ್ನಲಾರಂಭಿಸಿದರು. ಆತನ ಮಗ ಅಜಮತ್ ಶಾಹ ಬಹುಮನಿ ಮುಂದಿನ ರಾಜರಾದರು.'' ಹೀಗೆ 'ಸುಲ್ತಾನ ಸುರಳಿ'ಯಲ್ಲಿ ಬಹಮನಿ ಅರಸ ಸುಲ್ತಾನ್-ಎ-ಅಹಮದ ಶಾಹ ಹಾಗೂ ಬೊಮ್ಮಗೊಂಡನ ಭೇಟಿಯ ಕುರಿತು ಘಟನೆಯೊಂದು ಪ್ರಸ್ತಾಪಗೊಂಡಿದೆ. ಇದಲ್ಲದೇ ವೀರಸಂಗಯ್ಯನ ಪರಿಚಯವು ಹಾಗೂ ಆತನ ಕಾಲದ ಅರಸರ ಕುರಿತು ಮಾಹಿತಿ ಒದಗಿಸುತ್ತದೆ. ಬೊಮ್ಮಗೊಂಡೇಶ್ವರನು ವೀರಸಂಗಯ್ಯನ ಶಿಷ್ಯನಾಗಿದ್ದ ಎಂಬುದರಲ್ಲಿ ಸಂಶಯವಿಲ್ಲ. ಏಕೆಂದರೆ ಬೊಮ್ಮಗೊಂಡೇಶ್ವರನ ವಚನಾಂಕಿತವು 'ಗುರು ವೀರಸಂಗಯ್ಯ' ಎಂದಿದೆ. ಈ 'ಸುಲ್ತಾನ ಸುರಳಿ'ಯನ್ನು

ಡಾ॥ ಕೆ.ಎಂ.ಮೈತ್ರಿಯವರು ಗುಂಡಪ್ಪ ಫಾಳೆಪ್ಪ ಬೆಳಮಗಿ ತಾದಲಾಪುರ ತಾ॥ಜಿ॥ ಬೀದರ ಅವರಿಂದ ೧೯೯೨ರಲ್ಲಿ ಪಡೆದು, ಮೋಡಿ ಲಿಪಿ ಮರಾಠಿ ಭಾಷೆಯಲ್ಲಿರುವ ಹಸ್ತಪ್ರತಿಯನ್ನು ಕನ್ನಡಕ್ಕೆ ಅನುವಾದಗೊಳಿಸಿದ್ದಾರೆ. ಇದು ಏಕೈಕ ಲಿಖಿತ ಆಧಾರವಾಗಿದ್ದರಿಂದ ಸಂಶೋಧನೆಯಲ್ಲಿ ಇದನ್ನೇ ಮತ್ತೆ ಮತ್ತೇ ಬಳಸಿಕೊಳ್ಳುವುದು ಅನಿವಾರ್ಯವಾಗಿದೆ.

ಆದರೆ 'ಸುಲ್ತಾನ ಸುರಳಿ' ಬೊಮ್ಮಗೊಂಡೇಶ್ವರನ ಕುರಿತಂತೆ ಇಡಿಯಾದ ಚಿತ್ರಣ ಕೊಡುವುದಿಲ್ಲ. ಬಹಮನಿ ಅರಸನೊಂದಿಗೆ ಮಾಡಿದ ಭೇಟಿ ಮಾತ್ರ ಇಲ್ಲಿ ನೋಡಬಹುದಾಗಿದೆ. ಇದನ್ನು ಬಿಟ್ಟು ವೀರಸಂಗಯ್ಯನ ಪರಿಚಯ, ಕೋಟೆ ನಿರ್ಮಾಣ ಕುರಿತು ಪ್ರಸ್ತಾಪ ಬಂದಿದೆ. 'ಸುಲ್ತಾನ ಸುರಳಿ'ಯೊಂದರಿಂದಲೇ ಬೊಮ್ಮಗೊಂಡನ ಇಡೀ ಚಿತ್ರಣ ಕೊಡಲು ಸಾಧ್ಯವಿಲ್ಲ.

ಒಟ್ಟಾರೆಯಾಗಿ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಬಳಿಕ ಬೊಮ್ಮಗೊಂಡೇಶ್ವರನ ಒಟ್ಟು ಬದುಕನ್ನು ಅಗದಿ ಸರಳವಾಗಿತ್ತು ಎನಿಸುತ್ತದೆ. ಕುರಿಗಳನ್ನು ಕಾಯುತ್ತ ಧರ್ಮದಲ್ಲಿ ಆಸಕ್ತಿ ಇಟ್ಟುಕೊಂಡು ನಿರಾಡಂಬರ ಜೀವನ ನಡೆಸಿದ ಈತನ ಒಟ್ಟು ವ್ಯಕ್ತಿತ್ವ ಗಮನಿಸಿ ಜನರು ನಾಯಕನ ಪಟ್ಟ ಕೊಟ್ಟಿರಲು ಸಾಕು. ತನ್ನ ನಾಯಕತ್ವದ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿ, ಧಾರ್ಮಿಕ ಸಿದ್ಧಿ ಸಾಧನೆಗಳನ್ನು ಸಾಧಿಸಿಕೊಂಡು ಪ್ರಕೃತಿಗೆ ತೀರ ಹತ್ತಿರನಾಗಿ, ಜನೋಪಯೋಗಿ ಕಾರ್ಯಗಳನ್ನು, ಪವಾಡಗಳನ್ನು ಮಾಡುತ್ತ ಜನಪದರ ಮನಸ್ಸನ್ನು ಸೆಳೆದಿರುವುದರಲ್ಲಿ ಸಂಶಯವಿಲ್ಲ. ಒಬ್ಬ ವ್ಯಕ್ತಿ ದೈವೀಕರಣಕ್ಕೊಳಪಡುವುದು ಈ ಹಿನ್ನೆಲೆಯಲ್ಲಿಯೇ. ನಾಗರಿಕ ಸಮಾಜದಿಂದ ತೀರ ದೂರ ಉಳಿದಿರುವ ಬುಡಕಟ್ಟು ಒಂದರಲ್ಲಿ ಹುಟ್ಟಿದ ಈತ ಮಾಡಿದ ಕಾರ್ಯಗಳೆಲ್ಲವೂ ಮಹತ್ ಕಾರ್ಯಗಳೇ ಎನ್ನುವಂತೆ ಜನಪದರ ವ್ಯಾಖ್ಯೆಗಳನ್ನು ಗಮನಿಸಬಹುದು. ಆ ಕಾಲದಲ್ಲಿ ನಡೆದ ಘಟನೆಗಳನ್ನು ಕಣ್ಣೆದುರಿಗೆ ನಡೆದಿವೆ ಎನ್ನುವಂತೆ ವ್ಯಾಖ್ಯಾನಿಸುವ ಜನಪದರು ಇಂದಿಗೂ ಆತನ ಮೇಲೆ ಇಟ್ಟುಕೊಂಡ ಅಭಿಮಾನವನ್ನು ಸೂಚಿಸುತ್ತದೆ.

- - -

# ಆಧಾರ ಗ್ರಂಥಗಳು


(೧) ‘ಕನಕ ಸ್ಫೂರ್ತಿ’ ಮಾಸ ಪತ್ರಿಕೆ, ಸಂಪುಟ ೪, ಸಂಚಿಕೆ ೪, ನವೆಂಬರ ೧೯೯೭.
ಸಂ. ಎಚ್.ಸಿ. ಶಿವಕುಮಾರ
ಲೇಖನ : ‘ನಿರ್ಲಕ್ಷಿತ ಇತಿಹಾಸದಲ್ಲಿ ಬೊಮ್ಮಗೊಂಡೇಶ್ವರರ ಚರಿತ್ರೆ’
ಲೇಖಕರು : ಡಾ|| ಕೆ.ಎಂ. ಮೈತ್ರಿ
ಕನಕ ಪ್ರತಿಷ್ಠಾನ, ಶ್ರೀ ಕಾಗಿನೆಲೆ ಮಹಾ ಸಂಸ್ಥಾನ, ಕನಕ ಗುರುಪೀಠ,
ಕಾಗಿನೆಲೆ - ೫೮೧ ೧೫೩.

(೨) ‘ಕರ್ನಾಟಕ ಬುಡಕಟ್ಟುಗಳು’ ಸಂಪುಟ - ೧
ಪ್ರ.ಸಂ. : ಡಾ|| ಎಚ್.ಜೆ. ಲಕ್ಕಪ್ಪಗೌಡ
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ - ೨೦೦೦.

(೩) ‘ಬುಡಕಟ್ಟುಗಳ ಕುಲಕಸಬುಗಳು’
ಡಾ|| ಕೆ.ಎಂ. ಮೈತ್ರಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

(೪) ‘ವೀರ ಸಂಗಯ್ಯನ ಭಜನೆ’
ಶ್ರೀ ಶಾಂತಲಿಂಗ ಸ್ವಾಮಿ
ವಿಮಲ ಪ್ರಕಾಶನ, ಬೀದರ.

(೫) ‘ಶರಣ ಸೌರಭ’ ಸ್ಮರಣ ಸಂಚಿಕೆ
ಸಂ. ಪಂಚಾಕ್ಷರಿ ಪುಣ್ಯಶೆಟ್ಟಿ
ಲೇಖನ : ಬೊಮ್ಮಗೊಂಡೇಶ್ವರ - ಒಂದು ಅಧ್ಯಯನ
ಲೇಖಕರು : ಶ್ರೀ ಶಾಂತಲಿಂಗ ಸ್ವಾಮಿ
ಬೀದರ ಜಿಲ್ಲಾ ಮೂರನೇ ಕನ್ನಡ ಸಾಹಿತ್ಯ ಸಮ್ಮೇಳನ,
ಅಕ್ಟೋಬರ, ೧೯೯೧.

## ೩. ಬೊಮ್ಮಗೊಂಡೇಶ್ವರನ ಕುರಿತ ಜನಪದ ಕಥೆಗಳು ಹಾಗೂ ಐತಿಹ್ಯಗಳು

ಜನಪದದ ಒಟ್ಟು ಸಾಹಿತ್ಯ ಪ್ರಕಾರಗಳಲ್ಲಿ ಕಥೆಗಳ ಸ್ಥಾನ ವಿಶಿಷ್ಟವಾದದ್ದಾಗಿದೆ. ಕಥೆಗಳು ಆಯಾ ಕಾಲದ, ಪ್ರದೇಶದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ಇವು ಮೂಲತಃ ಮಾನವನ ಅವಶ್ಯಕತೆ ಫಲವಾಗಿ ಹುಟ್ಟಿಕೊಂಡರೂ ನಿಂತಲ್ಲಿ ನಿಲ್ಲದೇ ಕಾಲ, ದೇಶ, ಪರಿಸರ ಮೀರಿ ಸಂಚರಿಸುತ್ತವೆ. ಕೆಲವು ಸಲ ಇದ್ದಲ್ಲಿಯೇ ಇರಲೂಬಹುದು. ಮುಖ್ಯವಾಗಿ ಸ್ಥಳೀಯ ಕಥೆಗಳನ್ನು ಗಮನಕ್ಕೆ ತೆಗೆದುಕೊಂಡರೆ ಇವುಗಳ ಮಹತ್ವ ಅಪಾರ. ಏಕೆಂದರೆ ಸ್ಥಳೀಯ ಕಥೆಗಳು ಸಾಂಸ್ಕೃತಿಕ ಪರಿಸರವನ್ನು ನಿರ್ಮಾಣ ಮಾಡುವ ಶಕ್ತಿ ಹೊಂದಿರುತ್ತವೆ. ಆ ಮೂಲಕವಾಗಿ ಸಂಸ್ಕೃತಿಯ ವಿವಿಧ ಬಗೆಗಳನ್ನು ಬಿಚ್ಚಿಡುತ್ತ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಂಡಿರುತ್ತವೆ. ಆ ಕಥೆಗಳು ಎಷ್ಟು ಸತ್ಯ-ಮಿಥ್ಯ, ಎಷ್ಟು ಊಹೆ-ಕಾಲ್ಪನಿಕ ಎಂಬ ಪ್ರಶ್ನೆ ಇಲ್ಲಿ ಅಪಹಾಸ್ಯಕ್ಕೆ ಗುರಿಯಾಗುತ್ತದೆ.

ದೈವೀಕರಣಕ್ಕೊಳಗಾದ ಒಬ್ಬ ಐತಿಹಾಸಿಕ ವ್ಯಕ್ತಿ, ಜನಪದರ ಮೇಲೆ ಎಷ್ಟೊಂದು ಪ್ರಭಾವ ಬೀರಿರುತ್ತಾನೆಂದರೆ, ವ್ಯಕ್ತಿಯೊಬ್ಬನ ಕುರಿತಂತೆ ಕಥೆಗಳನ್ನು ಕಟ್ಟಿ ಅವನನ್ನು ಜೀವಂತ ಇರಿಸಲು ಪ್ರಯತ್ನಿಸುತ್ತಾರೆ. ಬೊಮ್ಮಗೊಂಡೇಶ್ವರನ ಕುರಿತಂತೆ ಬೀದರ ಜಿಲ್ಲೆಯಲ್ಲಿ ಕಥೆಗಳು ಸಿಗುತ್ತವೆ. ಈ ಕಥೆಗಳಲ್ಲಿ 'ಬೊಮ್ಮಗೊಂಡ' ಎಂಬ ನಾಮಪದವನ್ನು ತೆಗೆದು ಹಾಕಿದರೆ ಬಹುಶಃ ಈ ಕಥೆಗಳು ಬೊಮ್ಮಗೊಂಡೇಶ್ವರನ ಕಥೆಗಳು ಎಂದು ಗುರುತಿಸಲು ಸಾಧ್ಯವಾಗುತ್ತಿರಲಿಲ್ಲ. ವ್ಯಕ್ತಿಯೊಬ್ಬನು ಜನಪದ ಕಥೆ, ಐತಿಹ್ಯ, ಹಾಡು, ಪವಾಡ ಮುಂತಾದವುಗಳಲ್ಲಿ ಮತ್ತೆ ಮತ್ತೆ ಗೋಚರಿಸಿದರೆ ಅದು ಅವನ ಹಿಂದಿನ ಮಹತ್‌ಕಾರ್ಯವನ್ನು ಪ್ರಸಾರಗೊಳಿಸುವ ಉದ್ದೇಶ ಹೊಂದಿರುತ್ತದೆ ಎಂದೇ ಅರ್ಥ. ಜೊತೆಗೆ ವರ್ತಮಾನದಲ್ಲಿ ಆತನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತದೆ.

''ಕೆರೆ, ಹಳ್ಳ, ಬಾವಿಗಳು ಮೈದೆಗೆದರೆ ಗುಳ್ಳೆ, ಗೊರಚೆ, ಚಿಪ್ಪುಗಳು ಕಾಣುವಂತೆ, ವಾರಿಧಿ ಮೈದೆಗೆದರೆ ರತ್ನಗಳು ಕಾಣುವಂತೆ, ಜನಪದ ಕಥೆಗಳು ಮೈದೆಗೆದರೆ ಗತೇತಿಹಾಸದ ಕುರುಹುಗಳನ್ನು ಪ್ರಸ್ತುತ ಜೀವನವು ಆ ಗತಕಾಲದೊಂದಿಗೆ ಬೆಸೆದುಕೊಂಡ ಕೊಂಡಿಗಳನ್ನು ಕಾಣಬಹುದಾಗಿದೆ. ಅದಕ್ಕಾಗಿ ಜನಪದ ಕಥೆಗಳನ್ನು ಪ್ರಾದೇಶಿಕ ಮಟ್ಟದಲ್ಲಿ ಅಧ್ಯಯನ ಮಾಡುವಾಗ, ಈ ಕಥೆಗಳು ಸಾಂಸ್ಕೃತೀಕರಣಗೊಂಡ ಬಗೆಯನ್ನು ಶೋಧಿಸುವ ಕೆಲಸ ಮಾಡಬೇಕಾಗುತ್ತದೆ. ಹಾಗೆ ಮಾಡಿದಾಗ ಒಂದು ನಾಡಿನ ಇಡಿಯಾದ ಚರಿತ್ರೆಯ ಛಾಯೆಯ ಎಳೆಗಳು ಅವುಗಳ ಆಳದಲ್ಲಿ ಹುದುಗಿರುವುದನ್ನು ಕಾಣುತ್ತೇವೆ.''[೧] ಬೊಮ್ಮಗೊಂಡೇಶ್ವರನ ಕುರಿತಂತೆ ಇಲ್ಲಿ (ಬೀದರ) ಕಾಣಸುವ ಕಥೆಗಳು ಕೇವಲ ಬೀದರ ಜಿಲ್ಲೆಗೆ ಮಾತ್ರ ಸೀಮಿತಗೊಂಡಿವೆ ಎಂದು ಹೇಳಲಾಗುವುದಿಲ್ಲ. ನೆರೆ ರಾಜ್ಯಗಳಾದ ಆಂಧ್ರ, ಮಹಾರಾಷ್ಟ್ರದ ಕೆಲವು ಹಳ್ಳಿಗಳಲ್ಲಿಯೂ ದೊರೆತರೂ ದೊರೆಯಬಹುದು. ''ಬೀದರ ಜಿಲ್ಲೆಯ ಜನಪದ ಕಥೆಗಳು ಒಂದು ರೀತಿಯಲ್ಲಿ ಗಡಿನಾಡಿನ ಕಥೆಗಳು, ಇತ್ತ ಆಂಧ್ರ ಪ್ರದೇಶದ ಅತ್ತ ಮಹಾರಾಷ್ಟ್ರದ ಪ್ರಭಾವ ಅಲ್ಲಿನ ಭಾಷೆ, ಸಂಸ್ಕೃತಿಯ ಪ್ರಭಾವ ಜನಪದ ಸಾಹಿತ್ಯದ ಮೇಲೆ ಆಗಿರುವುದು ಸಹಜ. ಈ ಭಾಗ ಭಾಷೆಯ ವೈಚಿತ್ರ್ಯವನ್ನು ಅಧ್ಯಯನ ಮಾಡುವುದರ ಜೊತೆಗೆ

---

**ಅಡಿ ಟಿಪ್ಪಣಿ :**

೧. 'ಕನ್ನಡ ಜನಪದ ಪ್ರಜ್ಞೆ' ಡಾ।। ವೀರಣ್ಣಾದಂಡೆ, ಪು. ೧೧೭.

ನೆರೆಯ ಸಂಸ್ಕೃತಿಯ ಕಥೆಗಳು ಕನ್ನಡ ಕಥೆಗಳ ನಡುವೆ ನುಸುಳಿಕೊಂಡಿರಲು ಸಾಧ್ಯ. ಜನಪದ ಕಥೆಗಳಿಗೆ ಭಾಷಿಕ ಹಾಗೂ ಪ್ರಾದೇಶಿಕ ಕಟ್ಟುಗಳನ್ನು ಸಾಮಾನ್ಯವಾಗಿ ಹಾಕಲು ಸಾಧ್ಯವಾಗುವುದಿಲ್ಲವಾದರೂ ಪ್ರಾದೇಶಿಕ ವೈವಿಧ್ಯತೆಯ ದೃಷ್ಟಿಯಿಂದ ಅವುಗಳ ಅಧ್ಯಯನ ಕುತೂಹಲಕಾರಿಯಾಗಿರುತ್ತದೆ. ಬೀದರ ಜಿಲ್ಲೆಯ ಕಥೆಗಳು ಒಳ್ಳೆಯ ಪ್ರಾದೇಶಿಕ ಕಥೆಗಳಾಗಿ ಇಲ್ಲಿ ಲಭ್ಯವಾಗಿವೆ.''[೨] ಬೊಮ್ಮಗೊಂಡೇಶ್ವರ ಕುರಿತ ಕಥೆಗಳು ಸಹ ನೆರೆಯ ಆಂಧ್ರ ಪ್ರದೇಶ ಹಾಗೂ ಮಹಾರಾಷ್ಟ್ರದಲ್ಲಿ ಕಾಣಿಸಿಕೊಂಡರೆ ಆಶ್ಚರ್ಯವೇನಿಲ್ಲ. ಏಕೆಂದರೆ ಬೊಮ್ಮಗೊಂಡೇಶ್ವರನು ಒಬ್ಬ ಸಾಂಸ್ಕೃತಿಕ ವೀರನಾಗಿ ಆಂಧ್ರ ಹಾಗೂ ಮಹಾರಾಷ್ಟ್ರದ ಬೀದರ ಗಡಿ ಹಳ್ಳಿಗಳಲ್ಲೂ ಕಾಣಿಸಿಕೊಂಡಿದ್ದಾನೆ. ಅಲ್ಲಿಯೂ ಈತನ ಮೂರ್ತಿಗಳನ್ನು ಸ್ಥಾಪಿಸಿದ್ದು ನೋಡಬಹುದು.

**ಬೊಮ್ಮಗೊಂಡೇಶ್ವರರ ಕುರಿತ ಕಥೆಗಳು :**

- ಕೆಳುಸೇನ ರಾಜನ ಕಥೆ
- ಬೊಮ್ಮಗೊಂಡೇಶ್ವರನ ಬಾಲ್ಯದ ಕುರಿತ ಕಥೆ
- ಬೊಮ್ಮಗೊಂಡರ ಕೆರೆಯಲ್ಲಿನ ಸಂಪತ್ತು ಕುರಿತ ಕಥೆ

ಕ್ಯಾಥನಹಳ್ಳಿ ರಾಮಣ್ಣರ 'ಬೀದರ ಜಿಲ್ಲೆಯ ಜನಪದ ಕಥೆಗಳು' ಎಂಬ ಕೃತಿಯಲ್ಲಿ ಒಟ್ಟು ಇಪ್ಪತ್ತೈದು ಕಥೆಗಳಿವೆ. ಇವುಗಳಲ್ಲಿ ಮೊದಲನೆ ಕಥೆಯಾದ 'ಕೆಳುಸೇನರಾಜ'ನ ಕಥೆಯೇ ಬೊಮ್ಮಗೊಂಡನ ಕುರಿತಾಗಿದೆ. ಐತಿಹಾಸಿಕ ವ್ಯಕ್ತಿಯೊಬ್ಬನು ಹೇಗೆ ಕಥೆಗಳ ವಸ್ತುವಾಗಿ ಮಾರ್ಪಡುತ್ತಾನೆ ಎಂಬುದಕ್ಕೆ ಈ ಕಥೆಯೇ ಉತ್ತಮ ನಿದರ್ಶನವಾಗಿದೆ.

**ಕೆಳುಸೇನ ರಾಜನ ಕಥೆ**

ಕೈಲಾಸದಲ್ಲಿ ರಾಜಾ ದೇವಿಂದ್ರ ಸಭಾ ಮಾಡಿಕೊಂಡು ಕುಂತಿದ್ದ. ನಾಚು ಹಚ್ಚಿಕೊಂಡು ಗಾಯನ ಕೇಳಿಕೊಳ್ಳುತ್ತ ಕುಂತಿದ್ದ. ದೇವಾಂಗಣ ಅಂಬೊ ಮಗಳನ್ನು ತೊಡೆಯ ಮೇಲೆ ಕುಂದ್ರಿಸಿಕೊಂಡು ಕುಂತಿದ್ದ. ಮಗಳು ಕತ್ತಿನಲ್ಲಿ ಬೆವರಿನ ಮಣ್ಣು ತೆಗೆದು ಒಂದು ತೊನಸು ಮಾಡಿ ಬಿಟ್ಟಳು. ಆ ತೊನಸು ನಾಚು ಮಾಡುವಾಕೆಯ ಕಿವಿಯಲ್ಲಿ ಕುಂತುಕೊಂಡಿತು. ಆಕೆ ಗಾಯನ ಮಾಡುವುದು ಬಿಟ್ಟು ಬಾಜೂ ಹೋಗಿ ನಿಂತಳು. ರಾಜಾ ದೇವಿಂದ್ರ ಸಿಟ್ಟಿಗೆ ಬಂದ. 'ನೀ ಹ್ಯಾಂಗ ಬಗಲೋಗಿ ನಿಂತಿದ್ದಿ? ನಿಂಗ ಸರಾಪ ಕುಡ್ತೆ' ಅಂದ. ಆಕೆ, 'ಮಾರಾಜ್, ನನ್ ಕಡಿಂದ ತಪ್ಪಿಲ್ಲ, ನಿನ್ನ ಮಗಳ ಕಡಿಂದ ತಪ್ಪದ' ಅಂದಳು. ದೇವಿಂದ್ರ ಮಗಳನ್ನು ಕೇಳಿದ 'ಸುಳ್ಳು ಹೇಳಬೇಡ, ಖರೆ ಹೇಳು, ಏನು ತಪ್ಪದ?' ಆಕೆ ಅಂದಳು : 'ಯಪ್ಪಾ, ಎದಿ ಮ್ಯಾಲ ಮಣ್ ಬಂದಿತು. ಮಣ್ ತಗದು ತೊನಸು ಮಾಡಿದೆ. ತೊನಸು ಬಿಟ್ಟೆ, ಆ ತೊನಸು ಆಕಿ ಕಿವಿ ಮ್ಯಾಲ ಹೋಗ್ಯದ' 'ಅಂದ್ರ ನಿನಗ್ ಸರಾಪ್ ಕುಡ್ತೆ ಹಿಡಿ' ಅಂದ. 'ಸರಪಗ ಉಸ್ರಾಪ್ ಏನು ಕುಡ್ತಿಯಪ್ಪ' ಅಂತ ಕೇಳಿದಳು ಆಕೆ. ಬಾರಾ ವರ್ಷದ

---

**ಅಡಿ ಟಿಪ್ಪಣಿ :**

೨. 'ಬೀದರ ಜಿಲ್ಲೆಯ ಜನಪದ ಕಥೆಗಳು' ಸಂ. ಕ್ಯಾಥನಳ್ಳಿ ರಾಮಣ್ಣ, ಕೃತಿಗೆ ಜೀ.ಶಂ.ರವರ ಸಂಪಾದಕೀಯ ನುಡಿ.

ಹುಡುಗಿಯನ್ನು ಬಾರಾದಿನದ ಕೂಸು ಮಾಡಿದ ಒಂದು ಬಂಗಾರದ ಸಂದೂಕ ತೆಗೆದುಕೊಂಡ. ಆ ಸಂದೂಕದಲ್ಲಿ ಮಲಗಿಸಿದ ಕೂಸನ್ನು. ಮಲಗಿಸಿ ಮರ್ತ್ಯ ಲೋಕದಲ್ಲಿ ತಂದ ಒಂದು ಬಿದಿರು ಘಟ್ಟ ಇತ್ತು. ಅದರಲ್ಲಿ ಬಿಟ್ಟ.

ಆ ಬಿದಿರು ಘಟದಲ್ಲಿ ಒಬ್ಬ ಕುರುಬ ಇದ್ದ. ಸಾಟೀ ಖಂಡುಗ್ ಕುರಿ ಇದ್ದವು ಅವನ ಬಳಿ. ಆ ಘಟದಲ್ಲಿ ಅವನು ಕುರಿ ಮೇಯಿಸುತ್ತಿದ್ದ. ಅವನ ಹೆಸರಿತ್ತು ಬೊಮ್ಮಗೊಂಡ ಸುತ್ತಾ ಬಾರಾ ಹರಿ ಊರು ಇರಲಿಲ್ಲ. ಬೊಮ್ಮಗೊಂಡ ಒಬ್ಬನೇ ಕುರಿ ಮೇಯಿಸಿಕೊಳ್ಳುತ್ತ ನಿಂತಿದ್ದ. ಅವನ ಪರ್ಪಾಳಿ ಅಲ್ಲೇ ನಡೆಯುತ್ತಿತ್ತು. ಅವನಿಗೆ ಹೆಂಡರಿರಲಿಲ್ಲ ಮಕ್ಕಳಿರಲಿಲ್ಲ.

ಒಂದು ದಿವಸ ಏನಾಗಿದೆ, ಕುರಿ ಬಿಟ್ಟಿದ್ದ ಮೇಯ್ಲಲಿಕ್ಕೆ. ಆ ಕುರಿಗಳು ಮೆಯ್ಯುದ್ಕೊಳ್ಳುತ್ತ ಮೆಯ್ಯುದ್ಕೊಳ್ಳುತ್ತ ಆ ಬಿದಿರು ಘಟ್ಟದ ಬಳಿಗೆ ಹೋದವು. ಆಗ ಆ ಬಂಗಾರದ ಪೆಟ್ಟಿಗೆ ನೋಡಿ ಬೆದರಿ ನಿಂತು ಬಿಟ್ಟವು. ಆವಾಗ ಬೊಮ್ಮಗೊಂಡ, 'ಬಾರಾ ವರ್ಷ ಆಯಿತು ನಾ ಇಲ್ಲಿ ಕುರಿ ಮೈಸಲಿಕ್ಕೆ ಹತ್ತಿ. ನಮ್ಮ ಕುರಿಗಳು ಎಂದೂ ಅಂಜಿಲ್ಲ. ಇವತ್ತು ಅಂಜಲಿಕ್ಕೆ ಹತ್ತಿವೆ. ಅಂದರೆ ಏನದ ನೋಡಬೇಕು' ಅಂತ್ಹೇಳಿ ಅವನ ಬಳಿ ಭಾಲ್ಯ ಇತ್ತು , ಆ ಭಾಲ್ಯದಲ್ಲಿ ಹೀಗೆ ನೋಡಾಟಗೇನೆ ಕೆಂಪಗೆ ಕಾಣಿಸಿತು. ಸಂದೂಕ್ ಕಾಣಿಸಿತು. 'ಅರೆ, ಸಂದೂಕ ನೋಡಟಿಗೆ ಕುರಿಗಳು ಅಂಜ್ಯಾವಲ್ಲಪ್ಪ ಅದರಾಗೇನದೆ?' ಅಂತ ತೆಗೆದು ನೋಡುತ್ತಾನೆ. ಒಳಗೆ ಕೂಸು! ಆ ಕೂಸನ್ನು ತೆಗೆದುಕೊಂಡ. ತಕ್ಕೊಂಡು ಏನಂತಾನೆ, 'ನನಗೆ ಹೆಂಡ್ರಿಲ್ಲ, ಮಕ್ಳಿಲ್ಲ. ಪರಮಾತ್ಮ ನನಗ ಮಗಳ ಕೊಟ್ಟಾನಲ್ಲಪ್ಪ' ಅಂದು ಖುಷಿಯಾಗಿ ಬಂದು ಎತ್ತಿಕೊಂಡು ಕುರಿ ಹಾಲು ಹಿಂಡಿ ಕುಡಿಸಿದ ಕೂಸಿಗೆ. ಇನ್ನೂ ಕೂಸನ್ನು ಎಲ್ಲಿ ಕಟ್ಟಬೇಕು? ಘೊಂಗ್ಡಿ ಹಿಂದಕ್ಕೆ ಕಟ್ಟಿ ಆ ಘೊಂಗಡಿಯಲ್ಲಿ ಹಾಕಿಕೊಂಡ ಕೂಸನ್ನು. ಹಂಗೇ ನಡೆಯಿತು ಅವನ ಜಿಂದಗಿ ಅಲ್ಲೆ.

ಅದೇ ದೇಶದಲ್ಲಿ ಕಳಂಕಪಟ್ಟಣ ಎಂಬುದೊಂಡು ಊರಿತ್ತು. ಆ ಊರಿನಲ್ಲಿ ರಾಜಾ ಭೋಜ ಇದ್ದ ಅವನು ಒಂದಾನೊಂದು ದಿವಸ ದಂಡು ಲಸ್ಕರಿ ತಕೊಂಡು ಬೇಟೆ ಆಡಲಿಕ್ಕೆ ಹೊರಟ. ಆ ಬಿದಿರು ಘಟ್ಟಾದಲ್ಲಿ. ಮಧ್ಯಾಹ್ನದ ತನಕ ತಿರುಗಿದ್ದ. ಏನೋ ಬೇಟೆ ಸಿಗಲಿಲ್ಲ ಅವನಿಗೆ. ನೀಡ್ಕಿ ಭಾಳ ಆಯಿತು ಅವನಿಗೆ. ಆಗೋಣ, ಪ್ರಧಾನಿಗಂದ : 'ಎಲೋ ಪ್ರಧಾನಿ, ನೀರೆಲ್ಲವೆ ನೋಡೋ, ನಮಗ ನೀಡ್ಕಿ ಭಾಳ ಆಗೇದ'. ಪ್ರಧಾನಿ ಏನು ಮಾಡಿದ? ನೀರು ಹುಡುಕಿಕೊಳ್ಳುತ್ತ ಹೋದ. ಪ್ರಧಾನಿ ಏನು ಮಾಡಿದ ಆಮೇಲೆ? 'ನೀರು ಸಿಗೋಲ್ದಪ್ಪ ಇಲ್ಲಿ ಎಲ್ಲಿಯೂ' ಅಂತ್ಹೇಳಿ ಗಿಡ ಏರಿ ನಿಂತು ನೋಡಲು ಹತ್ತಿದ. ಅವನಿಗೆಲ್ಲೂ ಕಾಣಿಸಲಿಲ್ಲ. ಆ ಕುರುಬರವನ ಕುರಿ ಕಾಣಿಸಿತು. ಆವಾಗ ಮನಸ್ಸಿನಲ್ಲಿ ಅನ್ನುತ್ತಾನೆ ಪ್ರಧಾನಿ : 'ಆ ಕುರುಬಗ ಖೂನಿರ್ತದ ನೀರಿಂದು. ಹೋಗಿ ಕುರುಬಗ ವಿಚಾರ ಮಾಡ್ಬೇಕು.' ಅಂತ್ಹೇಳಿ ಗಿಡ ಇಳಿದು ಬಂದ ಕುರುಬನ ಬಳಿಗೆ. ಬಂದು ಅನ್ನುತ್ತಾನೆ ಪ್ರಧಾನಿ, 'ಎಲೋ ಕುರುಬ, ನಮ ರಾಜನಿಗೆ ನೀಡ್ಕಿ ಭಾಳ ಆಗ್ಯಾವ. ನೀರ್ ಮಾತ್ರ ನಮಗ್ ತೋರ್ಸ ಎಲ್ಯಾವ. ನೀರಿನ ಪತ್ತ ಹೇಳ್ದಿ ಅಂದ್ರ ಭಾಳ ಪುಣ್ಯ ಅದ.' 'ಇಲ್ಲೆಲ್ಲೊ ನೀರ್ ಸಿಗಂಗಿಲ ಏನಿಲ್ಲ ಯಾತಕ್ಕ ಬಂದ್ರಿ ಇಲ್ಲಿ' ಅಂತ ಕುರುಬ ಕೇಳಿದ. 'ಎಲೋ ಕುರುಬ, ನಮ್ಮ ರಾಜನಿಗೆ ನೀಡ್ಕಿ ಭಾಳ ಆಗ್ಯಾವ. ನೀವು

ನೀರಿನ ಪತ್ತೇದಾಗ ಇರ್ತೀರಿ, ನೀರ್ ಬಿಟ್ ಇರಲ್ರಿ. ನೀರ್ ತೋರ್ರು, ನಿನಗೆ ಪುಣ್ಯ ಬರ್ತದ' ಅಂತ ಪ್ರಧಾನಿ ಕೇಳಿದ. ಅದಕ್ಕೆ ಕುರುಬ ಅಂದ, 'ಅದೋ ಅಲ್ಲೊಂದು ಗುಂಡದ. ಮ್ಯಾಲೊಂದು ಕಲ್ಲಿಕ್ಕೀನಿ. ಕಲ ತಗದ ಕುಡೀರಿ ಹೋಗ್ರಿ.'

ನಾನೊಬ್ಬನೇ ಕುಡಿದರೆ ಏನು, ಎಷ್ಟು ದಂಡುದಾಳಿ ಇದೆಯೋ ಅದೆಲ್ಲವನ್ನೂ ತಂದು ರಾಜರನ್ನೂ ತಂದು ಎಲ್ಲರಿಗೂ ನೀರು ಕುಡಿಸಬೇಕು ಎಂದುಕೊಂಡು ಪ್ರಧಾನಿ ಹಿಂದಕ್ಕೆ ಹೋಗಿ ರಾಜನನ್ನು ದಂಡುದಾಳಿಯನ್ನೂ 'ನೀರ್ ಕುಡಿಲಾಕ್ ನಡೀರಿ' ಅಂತ ಹೇಳಿ ಕರಕೊಂಡು ಬಂದ. ಗುಂಡು ಅಂದರೆ ಅದು ದೊಡ್ಡ ಕೆರೆ. ಅದನ್ನು ಕುರುಬ ಬರೀ ಗುಂಡು ಅಂತಾನೆ. ದೊಡ್ಡ ಕಲ್ಲನ್ನು ಅದಕ್ಕೆ ಮುಚ್ಚಿಕ್ಕಿದ್ದಾನೆ. ಅದನ್ನು ದಂಡುದಾಳಿ ಬಾರಾ ಹಜಾರ ಮಂದಿ ಲಸ್ಕರಿ ಎಲ್ಲಾ ಹೊರಳಿಸುತ್ತಾರೆ. ಯಾರಿಗೂ ಹೊರಳುವುದಿಲ್ಲ ಅದು. ರಾಜಾ ಭೋಜ್ ಇದ್ದವನು 'ಲೋ ಕುರುಬ, ಈ ಕಲ್ ನಮಗ ಯಾರಿಗೂ ಎಳುವಲ್ದು. ಈ ಕಲ್ ತಕ್ಕೊಡಟ ಬಾ' ಅಂತಾನೆ. ಆವಾಗ ಆ ಕುರುಬ ಬಂದ. ಅವನ ಬಳಿ ತಪ್ಪಲು ಬಡಿಯುವ ಭಾಲ್ಯ ಇತ್ತಲ್ಲ, ಆ ಭಾಲ್ಯ ತಕೊಂಡು ಹೀಗೆ ಚಿಮ್ಮಿ ಹಾಕಿದ ಬೊಮಗೊಂಡ ಒಬ್ಬನೆ. ಕಲ್ಲು ತೆಗೆದು ನೋಡುತ್ತಾರೆ, ದೊಡ್ಡ ಕೆರೆ ಇದೆ ಅದು. ಅಷ್ಟೂ ಮಂದಿಯೆಲ್ಲ ಖುಷಿಯಿಂದ ನೀರು ತಕೊಂಡರು.

ರಾಜ ಕುರುಬನಿಗೆ ಹೇಳುತ್ತಾನೆ : 'ಲೋ ಕುರುಬ, ನೀರ್ ಕುಡಿಸಿದಿ ನಮಗೆ ಆನಂದ ಆತು. ಮತ್ ನೀ ಯಾನ್ ಬೇಡ್ತಿ ಬೇಡು ನನಗೆ.' 'ರಾಜಾ, ಸತ್ ಕುರಿ ಮಾರ್ಲಾಕ ಯಗ್ತೇದಿ ಕುಡು. ಅದಕ್ಕೇನು ಯಾರು ಕೇಳಬ್ಯಾಡ್ದು ಯಾರು ಹೇಳಬ್ಯಾಡ್ದು.' ಅದಕ್ಕೆ ರಾಜ ಅನ್ನುತ್ತಾನೆ : 'ಯಾನೋ ಹುಚ್ಚು, ನೀ ಏನ್ ಬೇಡ್ಲಾಕ್ ಹತ್ತಿದಿ? ಧನ ರಾಶಿ ಹಿಂತಾದು ಬೇಡ್ಲಾದು ಬಿಟ್ಟು ಇದೆಂತಾದು ಬೇಡ್ಲಾಕತ್ತಿ? ಹೋಗ್ ಕೊಟ್ಟೆ, ಹೋಗು.' ಕುರುಬ ಹೊರಟ. ಅವನು ಬೆನ್ನಿನಲ್ಲಿ ಕಟ್ಟಿಕೊಂಡಿದ್ದ ಘೊಂಗಡಿ ಕಾಣಿಸಿತು. 'ನಿನ್ ಹಿಂದೆ ಘೊಂಗ್ಡಿಯಾಗ್ ಯಾನದೆ?' ಅಂತ ಕೇಳಿದ ರಾಜ. 'ಆಡ ಮರಿ ಅದ ರಾಜಾ ಯಾನೂ ಇಲ್ಲ' ಅಂದ ಅವನು. 'ಐ ಕೂಸಿನ ಧನಿ ಹೊಂಟದ, ಕುರೇ ಮರಿ ಯಾತ್ಕದ? ಯಾನದ ತೋರ್ರು' ಅಂದ ರಾಜ. 'ಅಂದ್ರ- ಸರಕಾರ್, ಪರಮಾತ್ಮ ನನಗ ಕೂಸು ಕೊಟ್ಟಾನ. ಹೆಣಮಗಳದಾಳ.' 'ಆ ಕೂಸಿಗ ಕುಡು ನನಗ' ಅಂತ ಕೇಳಿದ ರಾಜ. ಅದಕ್ಕ ಬೊಮ್ಮಗೊಂಡ ಅಂದ : 'ರಾಜರೇ, ಇದನ ಯಾರಿಗಾದರ ಕುಡೂದೇ ಅದ. ಮತ್ಯಾರಿಗಾದ್ರ ಕೂಡೊನು ರಾಜರಿಗೆ ಕೂಡಲ್ಲನ್ಯಾಕ ತೊಗೋರಿ' ಅಂತ್ಹೇಳಿ ಕೊಟ್ಟ. ಆ ಕೂಸಿಗಿ ತೊಗೊಂಡ ರಾಜ.''

ಹೀಗೆ ಕಥೆ ಮುಂದುವರೆಯುತ್ತದೆ. ಈ ಕಥೆಯ ಕುರಿತು, 'ಕ್ಯಾಥನಹಳ್ಳಿ ರಾಮಣ್ಣ'ನವರು ತಮ್ಮ ಪ್ರಸ್ತಾವನೆಯಲ್ಲಿ ಹೀಗೆ ಹೇಳಿರುತ್ತಾರೆ. ''ಕಥೆಯ ಪ್ರಾರಂಭದಲ್ಲಿ ನಾವು ಕಾಣುವುದು ದೇವಾಂಗನೆಯೊಬ್ಬಳು ನಾಚು ಮಾಡುವಾಗ ನಿಲ್ಲಿಸಿ ರಸಭಂಗ ಮಾಡಿದಳೆಂದು ಕಾರಣಕ್ಕಾಗಿ ದೇವೇಂದ್ರ ಶಪಿಸಿ ಮಗುವನ್ನಾಗಿ ಮಾಡಿ ಮರ್ತ್ಯಲೋಕಕ್ಕೆ ತಂದು ಬಿಡುವ ದೃಶ್ಯ. ಆ ಮಗು, ಕಥೆಯ ಸಹಜ ರೂಪದ ಹಿನ್ನಲೆಯಲ್ಲಿ ಆಲೋಚಿಸಿದಾಗ, ಬೇಟೆಗಾಗಿ ಬಂದು ನೀರಡಿಕೆಯಾಗಿ ನೀರು ಹುಡುಕುತ್ತಿರುವ ರಾಜನೊಬ್ಬನಿಗೆ ಸಿಗಬೇಕಿತ್ತು. ಆದರೆ ಅದು ಸಿಕ್ಕಿದ್ದು ಬೊಮ್ಮಗೊಂಡನಿಗೆ. ಅವನಿಂದ

ರಾಜನಿಗೆ. ಹೀಗೆ ಐತಿಹ್ಯವೊಂದನ್ನು ಹೇಳುವ ಸಲುವಾಗಿ ಮನಸ್ಸಿನಲ್ಲಿ ಆಲೋಚಿಸಿಕೊಂಡಿದ್ದ ಕಥೆಗಾರ ಯುಕ್ತಿಯಿಂದಲೋ, ಆಕಸ್ಮಿಕವಾಗಿಯೋ ಅದನ್ನು ಕಥೆಯೊಳಗೆ ಸೇರಿಸಿ ಬಿಟ್ಟಿದ್ದಾನೆ''. ಸಂಗ್ರಹಕಾರನಾಗಲಿ ಹಾಗೂ ಸಂಶೋಧಕನಾಗಲಿ ಕಥೆ ಮತ್ತು ಐತಿಹ್ಯಗಳ ಕುರಿತಂತೆ ಪ್ರತ್ಯೇಕತೆಯನ್ನು ಗುರುತಿಸಿಕೊಳ್ಳುತ್ತಾನೆ ವಿನಃ ವ್ಯಕ್ತಾರ ಅಥವಾ ಕಥೆ ಹೇಳುವವನಲ್ಲ. ಇವನ ಉದ್ದೇಶ ಕೇವಲ ಕಥೆ ಹೇಳುವುದಾಗಿರುತ್ತದೆ, ವಿನಃ ಆ ಕುರಿತಂತೆ ಸಿದ್ಧಾಂತಗಳನ್ನು ಹಿಂಬಾಲಿಸುವುದಾಗಿರುವುದಿಲ್ಲ ಎಂಬುದು ನೆನಪಿನಲ್ಲಿಟ್ಟುಕೊಳ್ಳಬೇಕು. ಕೆಲವು ಸಲ ಕಥೆ-ಐತಿಹ್ಯಗಳು ಎಷ್ಟೊಂದು ಜಟಿಲ ಸ್ಥಿತಿಯಲ್ಲಿ ಎದುರುಗೊಳ್ಳುತ್ತವೆ ಎಂದರೆ ಅವುಗಳನ್ನು ಅರ್ಧನಾರೀಶ್ವರನನ್ನು ಹೋಲಿಸಬಹುದು. ಈ ಮೇಲಿನ ಕಥೆಯನ್ನೇ ತೆಗೆದುಕೊಳ್ಳಿ ಕಥೆಯೊಂದರಲ್ಲಿ ಐತಿಹ್ಯವು ಎಷ್ಟು ನೀರಾಳವಾಗಿ ತನ್ನ ಸ್ಥಾನವನ್ನು ಆಕ್ರಮಿಸಿ ಕೊಂಡಿದೆ. ಇಂತಹ ಸಹಸ್ರಾರು ಕಥೆ-ಐತಿಹ್ಯಗಳು ನಮಗೆ ಸಿಗಬಹುದು.

ಈ ಮೇಲಿನ ಕಥೆಯಲ್ಲಿ ಬರುವ ಬೊಮ್ಮಗೊಂಡನ ಕಥೆಯನ್ನು ನಾವು ಐತಿಹ್ಯವಾಗಿ ಏಕೆ ಸ್ವೀಕರಿಸುತ್ತೇವೆಂದರೆ - ಬೊಮ್ಮಗೊಂಡ ಒಬ್ಬ ಐತಿಹಾಸಿಕ ವ್ಯಕ್ತಿ ಅಷ್ಟೇ ಅಲ್ಲ ಒಂದು ಬುಡಕಟ್ಟಿನ ನಾಯಕ, ಜೊತೆಗೆ ಕಥೆಯಲ್ಲಿ ಬರುವ ಕೆರೆಯ ಪ್ರಸ್ತಾಪ. ಇವು ಎಲ್ಲವುಗಳಿಂದ ಈ ಕಥೆಯಲ್ಲಿ ಐತಿಹ್ಯ ನುಸುಳಿಕೊಂಡಿದೆ ಎಂಬುದು ಸ್ಪಷ್ಟವಾಗುತ್ತದೆ. ಏಕೆಂದರೆ ''ಗಿಡ ಮರಗಳಿಗೆ, ಕೆರೆ-ಕಟ್ಟೆಗಳಿಗೆ, ಹೊಲಗದ್ದೆಗಳಿಗೆ, ಬೆಟ್ಟಗುಡ್ಡಗಳಿಗೆ, ಗುಡಿಗೋಪುರಗಳಿಗೆ ಆರೋಪಿಸಿ ಹೇಳಲ್ಪಡುವ ಈ ಕಥೆಗಳು ನಿಸರ್ಗದ ನಡುವೆ ಒಂದು ತೆರೆದ ಪುಸ್ತಕಗಳಾಗಿ ಲಭ್ಯವಾಗುತ್ತದೆ. ಅವರು ಬರೆದ ಪುಸ್ತಕಗಳನ್ನು ಓದಬೇಕಾದುದಿಲ್ಲ. ತಮಗೆ ಬೇಕಾದ ಜೀವನ ಮೌಲ್ಯಗಳನ್ನು ಸ್ಫೂರ್ತಿ ಚೈತನ್ಯಗಳನ್ನು ಈ ಐತಿಹ್ಯಗಳಿಂದ ಪಡೆದುಕೊಳ್ಳಬಹುದು. ಕುಡಿಯುವ ನೀರ ಭಾವಿ ಇಲ್ಲದ ಊರು ಇಲ್ಲದಿರಲು ಹೇಗೆ ಸಾಧ್ಯವಿಲ್ಲ.''[೩] ಹಾಗೆಯೇ ಬೊಮ್ಮಗೊಂಡೇಶ್ವರನ ಕುರಿತ ಈ ಮೇಲಿನ ಕಥೆಯು ಕಥೆಯಾಗಿರದೇ ಅದೊಂದು ಐತಿಹ್ಯವೆಂದು ಹೇಳಬೇಕಾಗುತ್ತದೆ. ''ಏಕೆಂದರೆ ಬೀದರ ಕೋಟೆಯೊಳಗೆ ವಿಸ್ತಾರವಾಗಿ ಹರಡಿಕೊಂಡು ಬರಗಾಲದಲ್ಲೂ ನೀರಿನ ಆಸರೆಯನ್ನು ಪೂರೈಸಬಲ್ಲ ಕೆರೆಯಂಥ ಒಂದು ಕೊಳ ಇದೆ. ಅದನ್ನು ಕುರಿತು ಐತಿಹ್ಯವೊಂದು ನುಸುಳಿಕೊಂಡಿರುವುದು ಈ ಕಥೆಯ ವೈಶಿಷ್ಟ್ಯ. ಆ ಕುಂಡಕ್ಕೆ 'ಬೊಮ್ಮಗೊಂಡನ ಕೆರೆ' ಎಂದು ಕರೆಯುತ್ತಾರೆ.''[೪] ಅದಕ್ಕಾಗಿ ಈ ಕಥೆ ಅಪ್ಪಟ ಐತಿಹ್ಯವೇ ಆಗಿದೆ.

''ಆಂಧ್ರದಂಚಿನ ಕಾರಾಮುಂಗಿ ಗ್ರಾಮದ ಲಿಂಗವಂತ ಮಾಣಿಕಪ್ಪ(೪೮) ರವರಿಂದ ಸಂಪಾದಕರು ಮಾಹಿತಿ ಪಡೆದು ಬೊಮ್ಮಗೊಂಡನ ಕಥೆಯನ್ನು 'ಕೆಳುಸೇನ ರಾಜ' ಎಂಬ ಕಥೆಯಲ್ಲಿ ಸೇರಿಸಿರುತ್ತಾರೆ. ಬೊಮ್ಮಗೊಂಡನ ಕಥೆ ಇತ್ತೀಚೆಗೆ (೧೯೭೩ರಲ್ಲಿ) ಸಂಗ್ರಹಿಸಿರುವುದರಿಂದ ಕಥೆಗಾರ ಬೊಮ್ಮಗೊಂಡನ ಜಾತಿ 'ಕುರುಬ' ಎಂದು ಮತ್ತು ಆತ ರಾಜಭೋಜನಿಗೆ ನೀರು ಕುಡಿಸಿದೆನೆಂದು ಹೇಳಲಾಗಿದೆ. ಆದರೆ 'ಸುಲ್ತಾನ ಸುರಳಿ' ಐತಿಹಾಸಿಕ ಹಸ್ತಪ್ರತಿಯಲ್ಲಿ ಬೊಮ್ಮಗೊಂಡನ ಜಾತಿ 'ಧನಗರ' ಎಂದು ಆತ ಸುಲ್ತಾನ ಅಹಮದಷಾನಿಗೆ ನೀರು ಕುಡಿಸಿದ ಬಗ್ಗೆ ಉಲ್ಲೇಖಿಸಲಾಗಿದೆ. ಕಥೆಗಿಂತ

---

**ಅಡಿ ಟಿಪ್ಪಣಿ :**

೩. 'ಜೀಶಂಪರವರ ಜಾನಪದ ಬರಹಗಳು' ಸಂ. ಪ್ರೊ। ಕಾಳೇಗೌಡ ನಾಗವಾರ, ಅಂಬಳಿಕೆ ಹಿರಿಯಣ್ಣ, ಪು. ೩೮೮.

೪. 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂ. ಎಚ್.ಸಿ.ಶಿವಕುಮಾರ, ಪು.೧೨.

ಹಸ್ತಪ್ರತಿಯಲ್ಲಿರುವ ಮಾಹಿತಿಗಳು ಚರಿತ್ರೆಗೆ ಸಮೀಪವೆನಿಸುವವು. ಬೊಮ್ಮಗೊಂಡನ ಜಾತಿಯು ಗೊಂಡ-ಧನಗರ-ಕುರುಬ ಎಂಬ ವ್ಯತ್ಯಾಸಗಳು ಕಾಲಾಂತರದಲ್ಲಿ ಕಂಡು ಬರುವವವು ಆತನ ಹೆಸರೇ ಹೇಳಿರುವಂತೆ ಆತನು 'ಗೊಂಡ' ಜನಾಂಗದ ದಾರ್ಶನಿಕ ಐತಿಹಾಸಿಕ ಪುರುಷನಾಗಿರುವನು.''[೫] ಎಂಬುದು ಗಮನಿಸುವ ವಿಷಯ.

**ಬೊಮ್ಮಗೊಂಡನ ಬಾಲ್ಯದ ಕುರಿತ ಕಥೆ**

''ಕುಬೇರನೊಬ್ಬನಿಗೆ ಮೂರು ಜನ ಮಕ್ಕಳಿದ್ದರು. ಅವನು ಅಗರ್ಭ ಶ್ರೀಮಂತನಾಗಿದ್ದು ಒಕ್ಕಲಿಗನಾಗಿದ್ದ. ಅವನು ಸಾಯುವಾಗ ಮಕ್ಕಳನ್ನು ಕುರಿತು 'ನಮ್ಮ ಹೊಲದಲ್ಲಿ ಹುತ್ತೊಂದು ಇದೆ. ಯಾವುದೇ ಕಾರಣಕ್ಕೆ ಆ ಹುತ್ತಿಗೆ ಹೊಡೆಯಬೇಡಿ, ಮತ್ತು ಮ್ಯಾಲಕಡ (ಉತ್ತರ) ದಿಕ್ಕಿಗೆ ಹೋಗ ಕೂಡದು' ಎಂದು ಹೇಳಿ ತಂದೆ ಸತ್ತು ಹೋದ. ಮುಂದೆ ಮಕ್ಕಳು ತಂದೆ ಹೇಳಿದ ಮಾತನ್ನು ಕೇಳದೇ, ಆ ಹುತ್ತಿನಲ್ಲಿ ಏನಿರಬಹುದು? ಗಂಟೇನಾದರೂ (ಸಂಪತ್ತು) ಇದೇಯಾ? ಎಂದು ಬಗೆದು ಆ ಹುತ್ತನ್ನು ಮೂವರು ಕೂಡಿ ಕೆದರಿದರು. ಮರು ಕ್ಷಣವೇ ಹುತ್ತಿನಿಂದ ಸಾವಿರಾರು ಕುರಿಗಳು ಹೊರ ಬರಲಾರಂಭಿಸಿದವು. ಇಷ್ಟೊಂದು ಕುರಿಗಳು ಬರುತ್ತಿವೆ ಎಂದು ಗಾಬರಿಗೊಂಡು ಅಣ್ಣ-ತಮ್ಮಂದಿರು, ಆ ಸ್ಥಳದಲ್ಲಿ ಬೆಂಕಿ ಹಚ್ಚಿದರು ಅದರಿಂದ ಸುಟ್ಟ ಗಾಯಗೊಂಡ ಕುರಿಗಳು ಹಂಡ-ಬಂಡ (ಕರಿ, ಬಿಳಿ, ಕಂದು ಬಣ್ಣಗಳು ಸೇರಿ) ಬಣ್ಣದಾವುಗಳಾದವು. ಹೊರ ಬಂದ ಸಾವಿರಾರು ಕುರಿಗಳಲ್ಲಿ ಒಂದು ಬಂಗಾರದ ಕೊಂಬುಳ್ಳ ಕುರಿ ಹೊರ ಬಂದಿತು. ಅದನ್ನು ನೋಡಿದ ಅಣ್ಣ-ತಮ್ಮರು ಅದನ್ನು ತೆಗೆದುಕೊಳ್ಳದೆ ಹಿಂದಕ್ಕೆ ನೂಕಿದರು. ಉಳಿದ ಕುರಿಗಳನ್ನು ತೆಗೆದುಕೊಂಡು ಮೇಯಿಸಲಾರಂಭಿಸಿ ಜೀವನ ನಡೆಸಿದರು. ತಂದೆ ಹೇಳಿದ ಇನ್ನೊಂದು ಮಾತಿತ್ತು. ಅದೆಂದರೆ -

ಮ್ಯಾಲದಿಕ್ಕಿಗೆ ಹೋಗ ಕೂಡದು ಎಂಬುದು, ಅಣ್ಣ-ತಮ್ಮಂದಿರು ಆ ದಿಕ್ಕಿನ ಕಡೆ ಹೋದರೆ ಏನಾಗುವುದು ಎಂದು ಕುತೂಹಲದಿಂದ ಆ ದಿಕ್ಕಿನ ಕಡೆ ತಮ್ಮ ಕುರಿಗಳ ಸಮೇತ ಪ್ರಯಾಣ ಬೆಳೆಸಿದರು. ಘಟ-ಗೌಹರದಿಂದ ಕೂಡಿದ ಆ ಪ್ರದೇಶದಲ್ಲಿ ಬಂದವರಿಗೆ ಎಳೆದುಕೊಳ್ಳುವ ಒಂದು ಕೆರೆ ಇತ್ತು. ಆ ಕೆರೆಯಲ್ಲಿ ಕಪ್ಪೆಯೊಂದು ವಿಚಿತ್ರ ರೀತಿಯಲ್ಲಿ ಧ್ವನಿ ತೆಗೆಯುವುದನ್ನು ಕಂಡ ಅಣ್ಣ-ತಮ್ಮರು ಕುರಿಯೊಂದನ್ನು ಆ ಕೆರೆ ಕಡೆಗೆ ಅಟ್ಟುತ್ತಾರೆ. ಕೆಸರಿಂದ ಕೂಡಿದ ಆ ಕೆರೆಯಲ್ಲಿ ಕುರಿ ಮುಳಗಿ ಹೋಗುತ್ತದೆ. ಒಂದರ ನಂತರ ಒಂದು ಕುರಿಯನ್ನು ಅಟ್ಟುತ್ತಾ ಹೋಗುತ್ತಾರೆ. ಕೊನೆಗೆ ಕುರಿಗಳೆಲ್ಲಾ ಖಾಲಿಯಾದ ಬಳಿಕ ಸ್ವತಃ ಮೂವರು ಸೇರಿ ಕೆರೆ ಕಡೆಗೆ ನುಗ್ಗುತ್ತಾರೆ. ಕುರಿಗಳೇ ಹೋದ ಮೇಲೆ ನಾವೇಕಿರಬೇಕು ಎಂದು ಕುರಿಗಳ ಜೊತೆಗೆ ತಮ್ಮ ಪ್ರಾಣ ಕೂಡ ಕಳೆದುಕೊಳ್ಳುತ್ತಾರೆ.

ಇತ್ತ ಕಡೆ ಮೂವರಲ್ಲಿ ಒಬ್ಬನ ಹೆಂಡತಿಯ ಗರ್ಭದಲ್ಲಿ ಬೊಮ್ಮಗೊಂಡ ಬೆಳೆಯಲಾರಂಭಿಸಿದ್ದ. ದೈವ ಭಕ್ತೆಯಾದ ಅವಳು ಶಿವ ಮತ್ತು ಕಾಳಿಕಾ ದೇವಿಯ ಭಕ್ತಳಾಗಿರುತ್ತಾಳೆ. ಮುಂದೆ ಬೊಮ್ಮಗೊಂಡ ಹುಟ್ಟಿ ದೊಡ್ಡವನಾಗುತ್ತಾನೆ. ದೊಡ್ಡವನಾದ ಮಗ ತನ್ನ ತಂದೆ ಎಲ್ಲಿ ಎಂದು ಕೇಳಿದಾಗ ಮ್ಯಾಲ ದಿಕ್ಕಿನ ಕಡೆ ಹೋದವರು ಮರಳಿ ಬಂದಿಲ್ಲ ಎನ್ನುತ್ತಾಳೆ. ಆಗ ಬೊಮ್ಮಗೊಂಡ ತಾನೂ ಸಹ ಆ ದಿಕ್ಕಿನ ಕಡೆ

---

**ಅಡಿ ಟಿಪ್ಪಣಿ :**

೫. 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂ. ಎಚ್.ಸಿ.ಶಿವಕುಮಾರ, ಪು.೧೨.

ಹೋಗುವುದಾಗಿ ಹೇಳುತ್ತಾನೆ. ತಾಯಿ ಬೇಡ ಎಂದು ಹೇಳಿದರೂ ಕೇಳದೇ ಮಗ ಹೊರಟೇ ಬಿಡುತ್ತಾನೆ. ಆ ಕೆರೆಯ ಸಮೀಪ ಹೋದಂತೆ ಕಪ್ಪೆಯ ಶಬ್ದ ಇವನಿಗೂ ಕೇಳಿಸುತ್ತದೆ. ಆಗ ಅವನಿಗೆ ತಂದೆ ಜೊತೆ ಆದ ವೃತ್ತಾಂತ ತಿಳಿದು ಮರಳಿ ಬರುತ್ತಾನೆ.

ತಾನಿದ್ದ ಊರಲ್ಲಿ ಇನ್ನೂ ಮುಂದೆ ಇರಬಾರದು ಎಂದು ಹೇಳಿ ತಾಯಿ ಮಗ ಸಂಚಾರ ಕೈಗೊಳ್ಳುತ್ತಾರೆ. ಹೀಗೆ ಅಲೆಯುತ್ತಿರುವಾಗ ನೀರಡಿಸಿ ಉಸುಕನ್ನು ಕೆದರುವ ಸಂದರ್ಭದಲ್ಲಿ ಬಂಗಾರದ ಗೋಲಿಗಳು ಬೊಮ್ಮಗೊಂಡನಿಗೆ ಸಿಗುತ್ತವೆ. ಅವು ತಂದು ತಾಯಿಗೆ ತೋರಿಸಿದಾಗ ಅವು ಬಂಗಾರದೆಂದು ತಿಳಿಯದೇ ಹಾಗೆ ಮುಂದೆ ಪ್ರಯಾಣಬೆಳೆಸಿ ಹಳ್ಳಿಯೊಂದರಲ್ಲಿ ಆಶ್ರಯ ಪಡೆಯುತ್ತಾರೆ. ಅಲ್ಲಿ ಓಣಿ ಹುಡುಗರ ಜೊತೆ ಆಟ ಆಡುವಾಗ ಬಂಗಾರದ ಗೋಲಿಯನ್ನು ಪಟವಾರಿ ಹುಡುಗನೊಬ್ಬ ನೋಡಿ ತನ್ನ ತಂದೆಗೆ ಹೇಳುತ್ತಾನೆ. ಅವನು ಬಂದು ಬೊಮ್ಮಗೊಂಡನಿಗೆ ಗದರಿಸಿ ಕೇಳಲು ಗೋಲಿ ಸಿಕ್ಕ ವೃತ್ತಾಂತವನ್ನು ಇದ್ದಂತೆ ಹೇಳುತ್ತಾನೆ. ಇನ್ನಷ್ಟು ಗೋಲಿಗಳನ್ನು ತರಲು ಹೇಳಿದಾಗ, ಮತ್ತೇ ಅದೇ ಸ್ಥಳಕ್ಕೆ ಹೋಗಿ ಇನ್ನಷ್ಟು ಗೋಲಿಗಳನ್ನು ತಂದಾಗ ಇವನ್ನು ಎಲ್ಲಿಂದಲೋ ಕದ್ದು ತಂದಿದ್ದಾನೆ ಎಂದು ಹಳ್ಳಿಯವರೆಲ್ಲಾ ಗದರಿಸಲು ನಿಮಗೆ ತೋರಿಸುತ್ತೇನೆ ಎಂದು ಹೇಳುತ್ತಾನೆ. ಎಲ್ಲರೂ ಸೇರಿ ಅಲ್ಲಿಗೆ ಹೋಗಲು ಆ ಸ್ಥಳವನ್ನು ಕಾಯಲು ಅಕ್ಕ-ತಂಗಿಯರಿಬ್ಬರು ರಾಕ್ಷಸರಿರುತ್ತಾರೆ. ಈ ಇಬ್ಬರಲ್ಲಿ ತಂಗಿಯಾದವಳು ಬೊಮ್ಮಗೊಂಡನನ್ನು ಕೊಲ್ಲಲು ಪ್ರಯತ್ನಿಸುತ್ತಾಳೆ ಆದರೆ ಆಕೆಯ ಅಕ್ಕ ಬೊಮ್ಮಗೊಂಡನ ನಿಷ್ಕಲ್ಮಷ ಮನಸ್ಸನ್ನು ನೋಡಿ ಕಾಪಾಡುತ್ತಾಳೆ. ಇವಳು ದೇವಿ ಭಕ್ತಳಾಗಿದ್ದು ಜಗನ್ಮೋಹಿನಿಯಾಗಿರುತ್ತಾಳೆ. ತನ್ನಲ್ಲಿರುವ ಸಂಪತ್ತೆಲ್ಲ ಬೊಮ್ಮಗೊಂಡನಿಗೆ ಧಾರೆಯೆರೆದು ಕೊಡುತ್ತಾಳೆ. ಹಾಗೆ ಕಾಳಿಕಾದೇವಿಯ ಪ್ರಸಾದವನ್ನು ಕೊಟ್ಟು ಆಶೀರ್ವದಿಸುತ್ತಾಳೆ.''[೬]

ಈ ಕಥೆಯಲ್ಲಿ ಬೊಮ್ಮಗೊಂಡನೆ ನಾಯಕನಾಗಿದ್ದಾನೆ. ಜೊತೆಗೆ ಮೂವರು ಅಣ್ಣ-ತಮ್ಮಂದಿರು ಕುರಿಗಳ ಜೊತೆಗೆ ಪ್ರಯಾಣ ಬೆಳೆಸಿದರು ಎಂದಿದೆ. ಮೂವರು ಗೊಂಡರು ಅಲೆಮಾರಿಗಳು. ಇದಲ್ಲದೆ ಈ ಸಹೋದರರಿಗೆ ಕುರಿಗಳು ಸಾವಿರಾರು ಸಂಖ್ಯೆಯಲ್ಲಿ ದೊರೆತವು ಎಂದು ಕಥೆ ಹೇಳುತ್ತಿದೆ. ಮೊದಲ ಕಥೆಯಲ್ಲಿ ಬೊಮ್ಮಗೊಂಡನಲ್ಲಿ ಸಾಟೀ ಖಂಡುಗ ಕುರಿ ಇದ್ದವು ಎಂದು ಹೇಳುತ್ತದೆ. ಹಳ್ಳಿ-ಹಳ್ಳಿಯಲ್ಲಿ ದೊರೆಯುವ ಈತನ ಮೂರ್ತಿಗಳು ಕೂಡ ಇವನೊಬ್ಬ ಅಲೆಮಾರಿಯಾಗಿದ್ದು ಸದಾ ಕುರಿಗಳ ಜೊತೆಯಲ್ಲೆ ಇರುತ್ತಿದ್ದ ಎಂಬುದು ಸೂಚಿಸುತ್ತದೆ.

ಈ ಕಥೆಯಲ್ಲಿ ಕೂಡ ಸಾಮಾನ್ಯ ಜನಪದ ಕಥೆಯಂತೆ ಇದ್ದು ಅತೀಮಾನುಷ ಛಾಯೆ ಒಳಗೆ ನಿರೂಪಿಸಲ್ಪಟ್ಟಿದೆ. ಕಾಣೆಯಾದ ತನ್ನ ತಂದೆ ಹಾಗೂ ಆತನ ಸಹೋದರರನನ್ನು ಹುಡುಕಲು ಹೋದ ಬೊಮ್ಮಗೊಂಡ ಅವರನ್ನು ಕರೆದುಕೊಂಡು ಬರದೆ ಅವರ ಜೊತೆ ಆದ ವೃತ್ತಾಂತವನ್ನು ತಿಳಿದು ವಾಪಸ್ ಆಗುತ್ತಾನೆ. ಆದರೆ ಸಾಮಾನ್ಯವಾಗಿ ಜನಪದ ಕಥೆಗಳಲ್ಲಿ ಹೀಗಾಗುವುದಿಲ್ಲ. ತಂದೆಯನ್ನೋ,

---

**ಅಡಿ ಟಿಪ್ಪಣಿ :**

೬. ನರಸಪ್ಪಾ ಇಸ್ಮಲಗೊಂಡ ಬಕಚೌಡಿ (೬೦), ಬೀದರ.

ಸಹೋದರನನ್ನೋ, ರಾಜಕುಮಾರಿಯನ್ನೋ ಹುಡುಕಲು ಹೋದ ಕಥೆಯ ನಾಯಕ ಅವನನ್ನು ಕರೆದುಕೊಂಡೆ ಹಿಂದಿರುಗುತ್ತಾನೆ. ಜೊತೆಗೆ ದಾರಿಯುದ್ದಕ್ಕೂ ಪಡಬಾರದ ಕಷ್ಟವನ್ನು ಪಟ್ಟಿರುತ್ತಾನೆ. ಆದರೆ ಈ ಕಥೆಯಲ್ಲಿ ಹಾಗಿಲ್ಲ ನೇರವಾಗಿ ತಂದೆ ಹೋದ ಕೆರೆ ಬಳಿ ಹೋಗಿ ಹಿಂದಿರುಗುತ್ತಾನೆ. ಇಲ್ಲಿ ನಾಯಕನನ್ನು ಸಾಮಾನ್ಯೀಕರಣಗೊಳಿಸಿದ್ದು ವಿಶೇಷವಾಗಿದೆ ಎನ್ನಬಹುದು.

ದೊಡ್ಡವನಾದ ಬೊಮ್ಮಗೊಂಡ ಬಂಗಾರದ ಗೋಲಿಯಿಂದ ಪಟವಾರಿ ಹುಡುಗನೊಂದಿಗೆ ಆಟ ಆಡುವ ದೃಶ್ಯ ವಿಚಿತ್ರವೆನಿಸುತ್ತದೆ. ಮಗ ದೊಡ್ಡವನಾದ ಎಂದು ಹೇಳುವ ಕಥೆ ಸ್ವಲ್ಪ ಮುಂದೆ ಹೋಗಿ ಮಕ್ಕಳು ಆಟ ಆಡುವ ದೃಶ್ಯಕ್ಕೆ ಕರೆದುಕೊಂಡು ಹೋಗುತ್ತದೆ. ಇದು ಒಂದು ತರದಲ್ಲಿ 'ರಸ ಭಂಗ' ಆದಂತೆ ಅನ್ನಿಸುತ್ತದೆ. ಕಥೆಯ ಕೊನೆಯಲ್ಲಿ ಜಗನ್ಮೋಹಿನಿಯೊಬ್ಬಳು ಈತನನ್ನು ಕಾಪಾಡಿ ಸಂಪತ್ತನ್ನು ಜೊತೆಗೆ ಆಶೀರ್ವಾದ ಕೊಡುತ್ತಾಳೆ. ಇಲ್ಲಿಗೆ ಕಥೆ ಮುಕ್ತಾಯಗೊಳ್ಳುತ್ತದೆ. ಈ ಕಥೆಯ ಮೂಲ ಆಶಯ ಬೊಮ್ಮಗೊಂಡನ ನಿಷ್ಕಲ್ಮಶ ಮನಸ್ಸನ್ನು ಕುರಿತು ಹೇಳುವುದಾಗಿದೆ.

**ಬೊಮ್ಮಗೊಂಡನ ಕೆರೆಯಲ್ಲಿನ ಸಂಪತ್ತು ಕುರಿತ ಕಥೆ!**

''ಇಬ್ರು ಗಂಡ ಹೆಂಡ್ತಿ ಇದ್ದುರ್. ಅವ್ರು ಹೊಲ್ದಗ್ ಕೆಲಸಾ ಮಾಡಿ ಜೀವನ ನಡ್ಸಲತ್ತಿರು. ಒಂದು ದಿನ ಹಿಂಗೆ ಗಂಡುನ್ ತಲ್ಯಾಗ್ ಒಂದ್ ವಿಚಾರ ಬಂತು. ಇಲ್ಲ ಬೊಮ್ಮಗೊಂಡನ ಬಲ್ಲಿ ಬಕ್ಕೊಳ್ ಗಂಟ ಇತ್ತು. ಭಂಗಾರ್ದ ಮೂರ್ತಿನೆ ಇತ್ತು ಅಂತಾರ. ಅದು ಹೀನಾ ಭಿ ಆ ಬೊಮ್ಮಗೊಂಡನ ಕೆರಿದಾಗ ಅದಾ ಅಂತ ಮಂದಿ ಹೇಳ್ತಾರ. ಇಟ್ ಗಂಟ ಇದ್ದುರ್ ಭೀ ಒಟ್ಟ ಯಾರಿಗಭೀ ಉಪಯೋಗ ಆಗಾಲ್ದೋಗ್ಯಾದ ಇದುಕ್ ಏನಾರಾ ಮಾಡಿ ಹೋರಗ್ ತಗೀ ಬೇಕ್ ಅಂತ ಹೇಳಿ, ತಂದ್ರ್ಯಾಗ ತಾನೇ ಇಚಾರ ಹಾಕ್ದ. ಯಾರರ ಹುಷಾರ ಮನಷ್ಯಾಗ್ ಕೇಳಿ ನೋಡರ ಅಂತ. ಒಂದ ದಿನ ಒಬ್ಬ ಸಾಮಿ ಬಲ್ಲಿ ಹೋದ. ಹೋಗಿ ಆ ಸಾಮಿಗಿ ಕೇಳ್ದ, ಈ ಗಂಟ ಏನ್ ಮಾಡ್ದುರ ಕೈಗ್ ಹತ್ತುದ್? ಅಂತ ಕೇಳ್ದ. ಅದಕ್ಕ ಅಂವಾ ಸಾಮಿ ಒಂದು ಸಲ್ಹಾ ಕೊಟ್ಟ. ಅದು ಏನ್ ಅಂದುರ್ : 'ನೀ ಒಂದ್ ಆಕುಳ್ ಖರ್ದಿ ಮಾಡಬೇಕು. ಅದು ಒಂದು ಹೋರಿ ಕುಡ್ತದ, ಹೋರಿ ಕುಡಣ, ಆ ಆಕುಳ್ ಹಾಲ ಒಂದೀಟ ಭೀ ಹಿಂಡ್ಕೊಮಲ್ದಪ್ಲೆ ಆ ಹೋರಿಗೆ ಬಿಡಬೇಕ್. ಯಾರ ಭೀ ಒಂದ ಹನಿ ಹಾಲ ಎಂಜುಲ್ ಮಾಡಬಾರ್ದು ಮುಂದೆ ಆ ಹೋರಿ ಜರಾ ಧೋಡ್ದ ಆಯ್ತುದ್. ಆಯ್ತ ಅಂದುರ್ ಅದಕ್ಕ ಪೂಜೀ-ಗೀಜಿ ಮಾಡಿ ಬೊಮ್ಮಗೊಂಡನ ಕೆರ್ಯಾಗ ಬಿಡಬೇಕ್. ಆಗ ಅದು ಹೋಗಿ ಗಂಟ ಎಲ್ಲಿ ಇದ್ದುರ ಭೀ ತರ್ತುದ!' ಅಂತ ಹೇಳ್ದುನ. ಆದುರ್ ಒಂದ ಮಾತ್ ನೆಂಪ ಇಟ್ಕೋ, ಈ ಮಾತ್ ಯಾರಿಗ್ ಭೀ ಹೇಳಬಾಡ್ದು. ಹೇಳ್ದಿ ಅಂದುರ್ ಆ ಧಂದ್ಯ ಫ್ಹೇಲ್ ಆಯ್ತದ ನೋಡ! ಅಂತ ಹೇಳ್ದುನ ಸಾಮಿ.

ಸಾಮಿ ಹೇಳ್ದಂಗ್ ಆ ಮನಷ್ಯಾ ಒಂದ ಆಕುಳ ಖರದೀ ಮಾಡ್ದ. ಮಾಡಿ ಮನ್ಯಾಗ ಕಟ್ಟುನ. ಮುಂದೆ ಒಂದ ದಿನ ಆ ಆಕುಳ್ ಹೋರಿನೇ ಕುಡ್ತು. ಮನ್ಯಾಗ ಹೆಂಡ್ತೀಗಿ ಆಕುಳ್ ಹಾಲ ಹಿಂಡ್ಕೋಬಾಡ್ದ ಅಂತ ಹೇಳ್ದುನ. ಅಂವ ಹೇಳ್ದಂಗೆ ಒಂದ ಹನಿ ಹಾಲ ಭೀ ಹಿಂಡಲ್ದಪ್ಲೆ ಎಲ್ಲ ಹೋರಿಗೆ ಬಿಲ್ಡತುನ್. ಹೆಂಡ್ತಿ ಹಿಂಗ್ಯಾಕ ಮಾಡ್ಲತಿರಿ? ಅಂತ ಕೇಳ್ದುರ್ ನಿನಗ್ ಮತ್ ಹೇಳ್ತಿನಿ ಅಂತ ದಿನಗೋಳ್ ಮುಂದುಕ ಹಾಕೋತ ಹೋದುನ.

ಮುಂದ ಥೋಡೆ ದಿನಾ ಆಗಾಣಾ ಹೋರಿ ಜರಾ ಥೊಡ್ಡ ಆಯ್ತು. ಒಂದ ಛಂದ ದಿನ ನೋಡಿ ಪೂಜಾ-ಗೀಜಾ ಮಾಡಿ ಅದಕ್ಕೆ ಬೊಮ್ಮಗೊಂಡನ ಕೆರ್‍ಯಾಗ ಬಿಟ್ಟುನ. ಬಿಟ್ಟುನ ಖರೇ ಅಂಮರ ಅದು ಗಂಟ ತರಾದರ ಧೂರ ಉಳಿತು, ತಾ ಭೀ ವಾಪಸ್ ಬರಲ್ದ ಹೋಯ್ತು. ಹೋರಿ ಯಾಕ ವಾಪಸ್ಸು ಬರಲ್ದ ಹೋಗ್ಯಾದ? ಹಿಂಗ ಯ್ಯಾಕ ಆಯ್ತು ಅಂತ ಅವನಿಗೆ ಚಿಂತಿ ಆಯ್ತು. ಆಗ ಸಾಮಿಗಿ ಕೇಳಿ ಬರಾರಿ ಅಂತ ಕೇಳ್ಳಕ್ ಹೋದ. ಆಗ ಸಾಮಿ ಅಂತಾನ 'ನೀವು ಯಾರರ ಆಕಳ ಹಾಲ ಎಂಜುಲ್ ಮಾಡೀರ್ ಬೇಕ್ ಅದುಕ ಅದು ವಾಪಸ್ ಬಂದಿಲ್. ಅಲ್ಲೇ ಐಕ್ಯ ಆಗ್ಯಾದ' ಅಂತ ಹೇಳ್ದುನ. ಆಗ ಆ ಮನಷ್ಯ ಮನೀಗ್ ಬಂದು ಹೆಂಡ್ತೀಗಿ ಖರೆ ಹೇಳು ಏಗೋತರ ಆಕುಳ್ ಹಾಲ್ ಹಿಂಡ್ಕೊಂಡಿದೇನ್? ಅಂತ ಕೇಳ್ದುನ. ಅದುಕ್ ಹೆಂಡ್ತಿ 'ಹೊಯಿಂದ್ ಒಂದ ದಿನ ಹಾಲ ಹಿಂಡೀ ಕಾಸಿ ಕೂಸಿಗೆ ಕುಡ್ಸಿದ ನಿಮುಗ ಹೇಳ್ದುರ್ ಬೈತಿರಿ ಅಂತ ನಾ ಹೇಳಿಲ್ ಅಂತ ಅಂದುಳ್. ಆಗ ಗಂಡ ನನ್ನ ಬಾಯಿ ಮ್ಯಾಲ ಮಣ್ಣ ಹಾಕ್ದಲೆ ಅಂತ ಹಣೀಗಿ ಕೈ ಹಚ್ಕೊಣ ಕುಂತುನ.''[೨]

ಹೀಗೆ ಬೊಮ್ಮಗೊಂಡನ ಹತ್ತಿರ ಇರುವ ಗಂಟನ್ನು ಹಾಗೂ ಅದರ ರಹಸ್ಯ ಕುರಿತಂತೆ ಈ ಕಥೆ ಹೇಳುತ್ತದೆ. ಗಂಟೆ (ಸಂಪತ್ತು) ಗಾಗಿ ಅನೇಕ ಸಾಹಸಗಳು ನಡೆದೇ ಇವೆ ಇತಿಹಾಸದಲ್ಲಿ. ಅಷ್ಟೇ ಅಲ್ಲ ಇಂದಿನ ಸಮಾಜದಲ್ಲೂ ನಮ್ಮ ಸುತ್ತ-ಮುತ್ತ ಸಂಪತ್ತು ದೊರೆಯುವುದೆಂದು ಅನೇಕ ಅಪರಾಧಗಳು ಮಾಡುವವರಿದ್ದಾರೆ. ನಿಗೂಢ ಸಂಪತ್ತಿಗಾಗಿ ಪ್ರಾಣಿಗಳಿಗೇಕೆ ಮನುಷ್ಯರಿಗೂ ಬಲಿ ಪಶುವನ್ನಾಗಿ ಮಾಡುವುದು ಹೊಸದೇನಲ್ಲ. ಜನಪದ ಕಥೆಗಳಲ್ಲಿ ಗಂಟಿಗಾಗಿ ಸಾಹಸ ಕಾರ್ಯ ಮಾಡಿದ ಸಹಸ್ರ ಕಥೆಗಳು ಸಿಗುತ್ತದೆ. ಬೊಮ್ಮಗೊಂಡನ ಕಥೆ ಐತಿಹ್ಯಗಳಲ್ಲಿ ಗಂಟು ಅಥವಾ ಸಂಪತ್ತಿನ ಪ್ರಸ್ತಾಪ ಮತ್ತೆ-ಮತ್ತೆ ಬರುತ್ತದೆ. ಇದಕ್ಕೆ ಐತಿಹಾಸಿಕವಾದ ಕಾರಣವೇನಾದರೂ ಇರಲೇ ಬೇಕು. ಇಲ್ಲದಿದ್ದರೆ ಈ ರೀತಿಯ ಕಥೆಗಳು ಅಜ್ಞಾತ ಸಂಪತ್ತಿನ ಕುರಿತಂತೆ ಪುನಃರುಚ್ಚರಿಸುತ್ತಿರಲಿಲ್ಲ ಎನಿಸುತ್ತದೆ.

ಬೊಮ್ಮಗೊಂಡನ ಕುರಿತಂತೆ ಬೀದರ ಜಿಲ್ಲೆಯಲ್ಲಿ ಮುಖ್ಯವಾಗಿ ಬೀದರ ತಾಲೂಕು ಒಳಗೊಂಡಂತೆ ಕಥೆಗಳನ್ನು ಹೇಳುವವರು ಹಲವರಿದ್ದಾರೆ. ಒಬ್ಬ ಹೇಳುವ ಕಥೆಗಳಿಗೂ ಇನ್ನೊಬ್ಬ ಹೇಳುವ ಕಥೆಗಳಿಗೂ ಸಾಕಷ್ಟು ಅಂತರ ಇಲ್ಲದಿದ್ದರೂ ಅಂದರೆ ವಸ್ತು ಒಂದೇ ಆಗಿದ್ದು, ಹೇಳುವ ಶೈಲಿಗಳು ವಿಭಿನ್ನವಾಗಿವೆ. ಒಬ್ಬ ವಿಷಯವನ್ನು ಹಿಡಿದು ಜಗ್ಗಿ ಎಳೆದಾಡಿ ಹೇಳಿದರೆ, ಇನ್ನೊಬ್ಬ ದಿಢೀರನೇ ಪ್ರಾರಂಭ ಮಾಡಿ ದಿಢೀರನೆ ಮುಗಿಸಿ ಬಿಡುತ್ತಾನೆ. ಇದಕ್ಕೆ ಬೇರೆ-ಬೇರೆ ಕಾರಣಗಳು ಇರಬಹುದಾದರೂ, ''ವಿಸ್ತೀರ್ಣದಲ್ಲೂ ತೀರ ಚಿಕ್ಕದಾದ ಈ ಜಿಲ್ಲೆ ಪರಭಾಷೆ, ಪರಸಂಸ್ಕೃತಿಗಳ ತುಳಿತಕ್ಕೆ ಈಡಾಗಿ ಇಲ್ಲಿಯ ಕನ್ನಡ ತನ್ನ ಶ್ರೀಮಂತಿಕೆಯನ್ನು ಬರದಾಗಿದೆ. ಇಂದರಿಂದಾಗಿ ಇಲ್ಲಿ ಜನಪದ ಸಾಹಿತ್ಯದ ವಿಪುಲವಾದ ಬೆಳವಣಿಗೆಗೆ ಪೆಟ್ಟು ಬಿದ್ದಿದೆ. ಅದರಲ್ಲೂ ಜನಪದ ಸಾಹಿತ್ಯದ ದೊಡ್ಡ ಪ್ರಕಾರಗಳಾದ ಕಥೆ, ಬಯಲಾಟಗಳು ಇಲ್ಲಿ ಸಮೃದ್ಧಿಯಾಗಿ ಬೆಳೆಯಲು ಆಗಿಲ್ಲ. ಜನಪದ ಕಥೆಗಳ ಜೀವಂತಿಕೆ ವೃತ್ತಾರನ

---

**ಅಡಿ ಟಿಪ್ಪಣಿ :**

೨. ಗುಂಡಮ್ಮ (೭೫) ಶಹಗಂಜ, ಬೀದರ.

ಜಾಣ್ಮೆ ಮತ್ತು ಭಾಷೆಯ ಚಮತ್ಕಾರವನ್ನು ಅವಲಂಬಿಸಿದೆ. ಇಲ್ಲಿಯ ವಕ್ತಾರನಲ್ಲಿ ಭಾಷೆಯ ಚಮತ್ಕಾರ ಕಾಣದೆ ಕಥಾ ವಿವರಗಳು ತೇಪೆ ಹಾಕಿದಂತೆ ಕಾಣುತ್ತವೆ. ಒಂದೊಂದು ಸಲ ತೀರ ವಿಕಾರತೆಯನ್ನು ಪಡೆಯುತ್ತವೆ.'[೮]

ಹೀಗೆ ಬೊಮ್ಮಗೊಂಡೇಶ್ವರನ ಕಥೆಗಳನ್ನು ಹಳೆ ತಲೆಮಾರಿನವರು ಕೇಳುಗನ ಕಣ್ಣುಕಟ್ಟುವಂತೆ ನಿರೂಪಿಸುತ್ತಾರೆ. ಹೊಸ ತಲೆಮಾರಿನವರು ಇಂತಹ ಕಥೆ, ಐತಿಹ್ಯಗಳನ್ನು ತಮ್ಮ ಮನದಾಳದಲ್ಲಿ ಹುದುಗಿಸಿಕೊಂಡು ಮುಂದಿನ ತಲೆಮಾರಿನವರಿಗೆ ವರ್ಗಾಯಿಸುತ್ತಾರೆ. ಆ ಮೂಲಕ ಧೈರ್ಯ, ಸಾಹಸ, ಮಾನವೀಯತೆ, ಪ್ರಾಮಾಣಿಕತೆ, ಪರೋಪಕಾರ, ಧಾರ್ಮಿಕ ಮನೋಭಾವ ಬೆಳಸಿಕೊಳ್ಳಲು ಅನುವು ಮಾಡಿಕೊಡುತ್ತಾರೆ. ಇದರ ಜೊತೆ ಜೊತೆಗೆ ಪ್ರಾದೇಶಿಕ ಇತಿಹಾಸದ ಮೇಲೆ, ಮರೆಯಾದ ಘಟನೆಗಳ ಮೇಲೆ ಬೆಳಕು ಚೆಲ್ಲಲು ಸಾಧ್ಯವಾಗುತ್ತದೆ. ಗತಿಸಿ ಹೋದ ಅನೇಕ ಘಟನೆಗಳನ್ನು ಪುನಃಪರಿಶೀಲಿಸಲು ಇಂಥ ಕಥೆಗಳು ಸಹಾಯಕವಾಗುತ್ತವೆ. ಅದರಲ್ಲೂ ಪ್ರಾದೇಶಿಕ ಮಟ್ಟದಲ್ಲಿ ಪ್ರಚಾರ ಇರುವ ಅಥವಾ ಸೀಮಿತ ನೆಲೆಗಳಲ್ಲಿ ಕಂಡು ಬರುವ ಕಥೆಗಳಿಂದ ಸಾಂಸ್ಕೃತಿಕ ವೈವಿಧ್ಯತೆಯನ್ನು ಅರಿಯಬಹುದು.

ಬೊಮ್ಮಗೊಂಡೇಶ್ವರನ ಕುರಿತ 'ಕೆಳುಸೇನ ರಾಜನ' ಕಥೆಯಲ್ಲಿ ಪ್ರಾರಂಭದಲ್ಲಿ ಬೊಮ್ಮಗೊಂಡ ನಾಯಕನಾಗಿ ಕಂಡು ಬಂದು ತನಗೆ ಸಿಕ್ಕಿರುವ ಮಗುವನ್ನು ಅರಸನಿಗೆ ಕೊಡುವುದರ ಮೂಲಕ ಕಥೆಯಿಂದ ತಾನು ಸಂಪೂರ್ಣವಾಗಿ ಮರೆಯಾಗುತ್ತಾನೆ. ಮುಂದೆ ಕಥೆಯ ಅಂತ್ಯದವರೆಗೆ ಬೊಮ್ಮಗೊಂಡನ ಹೆಸರು ಕಾಣುವುದೇ ಇಲ್ಲ. 'ಆ ಕೂಸಿಗೆ ಕುಡು ನನಗೆ' ಅಂತ ಕೇಳಿದ ರಾಜ. ಅದಕ್ಕ ಬೊಮಗೊಂಡ ಅಂದ : 'ರಾಜರೇ, ಇದನ ಯಾರಿಗಾದರ ಕುಡೂದೇ ಅದ. ಮತ್ಯಾರಿಗ್ರಾದ್ರು ಕೂಡೊದು ರಾಜರಿಗೆ ಕುಡಲ್ಲನ್ಯಾಕ ತೊಗೊರಿ' ಅಂತ್ಹೇಳಿ ಕೊಟ್ಟ. ಆ ಕೂಸಿಗಿ ತೊಗೊಂಡ ರಾಜ. ಎನ್ನುವಲ್ಲಿ ಬೊಮ್ಮಗೊಂಡನ ಪಾತ್ರ ಮುಕ್ತಾಯವಾಗುತ್ತದೆ. ಆದರೆ ಕಥೆ ಮಾತ್ರ ಹಾಗೆ ಮುಂದುವರೆದು ರೋಚಕ ತಿರುವುಗಳನ್ನು ಪಡೆದುಕೊಂಡು ಮುಕ್ತಾಯವಾಗುತ್ತದೆ. ಬೊಮ್ಮಗೊಂಡನು ಕೊಟ್ಟ ಮಗು ಕಥಾ ನಾಯಕಿಯಾಗಿ ಕಂಡು ಬರುತ್ತಾಳೆ.

ಬೊಮ್ಮಗೊಂಡನ ಬಾಲ್ಯದ ಕುರಿತ ಕಥೆ, ತಂದೆ, ಚಿಕ್ಕಪ್ಪಂದಿರದಿಂದ ಪ್ರಾರಂಭವಾಗಿ ಬೊಮ್ಮಗೊಂಡನು ಪ್ರಾಮಾಣಿಕತೆಯಿಂದ ಮೆರೆದು ಕಾಳಿಕಾದೇವಿಯ ಆಶೀರ್ವಾದ ಪಡೆಯುವುದರೊಂದಿಗೆ ಮುಕ್ತಾಯಗೊಳ್ಳುತ್ತದೆ. ಬೀದರ ಒಳಕೋಟೆಯಲ್ಲಿ ಬೊಮ್ಮಗೊಂಡನ ಕೆರೆ ಸಮೀಪದಲ್ಲಿ ಒಂದು ಕಾಳಿಕಾ ದೇವಿ ಮಂದಿರವಿದೆ. ಇಂದಿಗೂ ಅನೇಕ ಭಕ್ತಾದಿಗಳು ಇಲ್ಲಿಗೆ ಬಂದು ಪೂಜೆ, ಉತ್ಸವ, ಹರಕೆ ಮುಂತಾದವುಗಳನ್ನು ನೆರವೇರಿಸುತ್ತಾರೆ. ಇದರಿಂದ ಬೊಮ್ಮಗೊಂಡನಿಗೆ ಕಾಳಿಕಾದೇವಿ ಮಂದಿರಕ್ಕೂ ಯಾವುದೋ ಒಂದು ಅಸ್ಪಷ್ಟ ಸಂಬಂಧ ಇರುವುದು ಗೊತ್ತಾಗುತ್ತದೆ. ಕಥೆಯಲ್ಲಿ ಬರುವ ಜಗನ್ಮೋಹಿನಿ ಬೊಮ್ಮಗೊಂಡನ ಪ್ರಾಮಾಣಿಕತೆ ಗುರುತಿಸುವ ಮೂಲಕ ರೋಚಕತೆ ತಂದು ಕೊಡುತ್ತಾಳೆ. ಸುಖಾಂತದಿಂದ ಕೂಡಿದ ಈ ಕಥೆ ಕೇಳುಗರರಿಗೆ ಖುಷಿ ಕೊಡುತ್ತದೆ.

---

**ಅಡಿ ಟಿಪ್ಪಣಿ :**

೮. 'ಕನ್ನಡ ಜನಪದ ಪ್ರಜ್ಞೆ' ಡಾ॥ ವೀರಣ್ಣಾದಂಡೆ, ಪು. ೧೬.

ಬೊಮ್ಮಗೊಂಡನ ಕೆರೆಯಲ್ಲಿನ ಸಂಪತ್ತು ಕುರಿತ ಕಥೆಯಲ್ಲಿ ಹೇಗಾದರೂ ಮಾಡಿ ಕೆರೆಯೊಳಗಿನ ಸಂಪತ್ತು ಪಡೆಯಬೇಕು ಎಂಬ ಆಸೆಯಿಂದ ವಿವಿಧ ಕಸರತ್ತು ಮಾಡಿದ ವ್ಯಕ್ತಿಯೊಬ್ಬನ ಕಥೆಯಿದೆ. ಬಾಲ್ಯದ ಕುರಿತ ಕಥೆಯಲ್ಲಿ ಬೊಮ್ಮಗೊಂಡನಿಗೆ ಅಪಾರ ಸಂಪತ್ತು ಜಗನ್ಮೋಹಿನಿ ಕೊಡುತ್ತಾಳೆ, ಬಂಗಾರದ ಪುತ್ಥಳಿಯೊಂದು ಅವನಲ್ಲಿತ್ತು ಎಂದು ಹೇಳುತ್ತದೆ ಐತಿಹ್ಯ. ಕೆಳುಸೇನ ರಾಜನ ಕಥೆಯಲ್ಲಿ ಬಂಗಾರದ ಪೆಟ್ಟಿಗೆಯಲ್ಲಿ ಮಗುವೊಂದು ಸಿಕ್ಕಿತು. ಎನ್ನುವ ಗಂಟಿನ (ಸಂಪತ್ತಿನ) ಕುರಿತು ವಿವಿಧ ಮಾಹಿತಿಗಳು ಅಪರಿಚಿತ ದಿಕ್ಕಿನ ಕಡೆಗೆ ಬೆರಳುಮಾಡಿ ತೋರಿಸುತ್ತಿವೆ. ಬೊಮ್ಮಗೊಂಡೇಶ್ವರನ ಕುರಿತ ಈ ಕಥೆಗಳನ್ನು ಬಳಸಿ ಒಟ್ಟು ಚಿತ್ರಣವನ್ನು ಚಿತ್ರಿಸಬಹುದಾಗಿದೆ.

**ಬೊಮ್ಮಗೊಂಡೇಶ್ವರನ ಕುರಿತ ಐತಿಹ್ಯಗಳು :**

ಬೊಮ್ಮಗೊಂಡೇಶ್ವರನು ಆಗಲೇ ಹೇಳಿರುವಂತೆ ಒಬ್ಬ ಐತಿಹಾಸಿಕ ವ್ಯಕ್ತಿ. ಈತನ ಕುರಿತು ನಮಗೆ ತೀರ ಗಟ್ಟಿ ಆಧಾರಗಳು ಸಿಗದಿದ್ದರು ಐತಿಹ್ಯಗಳು ಈತನ ಕುರಿತಂತೆ ಮಾಹಿತಿಯನ್ನು ಒದಗಿಸುತ್ತವೆ. ಆದಕ್ಕಾಗಿಯೇ ಐತಿಹ್ಯದ ಪ್ರಾಮುಖ್ಯತೆ ಕುರಿತು ಈ ಸಂದರ್ಭದಲ್ಲಿ ಹೆಚ್ಚು ಒತ್ತು ಕೊಟ್ಟು ಹೇಳಬೇಕಾಗುತ್ತದೆ. ಗತ ಇತಿಹಾಸವನ್ನು ತೆರೆದು ತೋರಿಸುವ ಐತಿಹ್ಯಗಳು ಜನಪದರಲ್ಲಿ ವಿಶಿಷ್ಟ ಸ್ಥಾನ ಪಡೆದುಕೊಂಡಿವೆ. ಐತಿಹ್ಯಗಳನ್ನು ಹೇಗೆಂದರೆ ಹಾಗೆ ಎಲ್ಲಿ ಬೇಕಾದಲ್ಲಿ ಯಾರು ಬೇಕಾದರೂ ಹೇಳುವ ಹಾಗಿಲ್ಲ. ಸಿಕ್ಕವರ ಬಾಯಲ್ಲಿ ಐತಿಹ್ಯಗಳು ರೋಚಕವಾಗಿ ಕಾಣಲಾರವು. ಅದಕ್ಕಾಗಿ ವಿಶಿಷ್ಟವಾದ ಕೆಲವೇ ಜನರು ಇವು ಹೇಳಲು ಸೂಕ್ತರಾಗಿರುತ್ತಾರೆ. ಅವರಿಂದಲೇ ಈ ಐತಿಹ್ಯಗಳು ಹೆಚ್ಚು ಪ್ರಾಮುಖ್ಯತೆ ಪಡೆಯುತ್ತವೆ.

''ಬೀದರ ಜಿಲ್ಲೆಯ ಮಟ್ಟಕ್ಕೆ ಹೇಳಬೇಕೆಂದಲ್ಲಿ ಇಲ್ಲಿ ಐತಿಹ್ಯಗಳಿಗೇನು ಕೊರತೆಯಿಲ್ಲ. ಶತಶತಮಾನಗಳ ಐತಿಹ್ಯ ಪಡೆದ ವಿವಿಧ ಜನಾಂಗಗಳ ಸಮ್ಮಿಲನದ ಸಂಕೇತ ಬಾಂಧವ್ಯದ ಕೇಂದ್ರ.''[೯] ಕೋಟೆ ಕೊತ್ತಲುಗಳು, ಗುಡಿಗುಂಡಾರಗಳು, ಹಳ್ಳ-ಕೊಳ್ಳ, ಕೆರೆ, ಗುಡ್ಡ, ಬೆಟ್ಟಗಳೆಲ್ಲವೂ ಇತಿಹಾಸದ ತುಕಡಿಯನ್ನು ಬಿಚ್ಚಿ ತೋರಿಸಲು ಹವಣಿಸುತ್ತದೆ. ಬಸವಾದಿ ಶರಣರ ಕಾರ್ಯಕ್ಷೇತ್ರ ಬೀದರ ಆದುದ್ದರಿಂದ ಇಲ್ಲಿ ಶರಣರ ಕುರಿತ ಅನೇಕ ಐತಿಹ್ಯಗಳು ದೊರೆಯುತ್ತವೆ. ಈ ಶರಣರ ಕಾಲ ಘಟ್ಟ ಮುಗಿದ ನಂತರ ಅಂದರೆ ೧೪-೧೫ನೇ ಶತಮಾನದ ಪೂರ್ವಾರ್ಧದ ನಡುವೆ ಬೊಮ್ಮಗೊಂಡೇಶ್ವರನ ಕಾಲ ಸುಳಿದಾಡುತ್ತದೆ. ಐತಿಹ್ಯ ಇತಿಹಾಸಕ್ಕೆ ಮಾಹಿತಿ ಒದಗಿಸಿ ಕೊಡುವಂಥದ್ದಾಗಿದ್ದರಿಂದ ಬೊಮ್ಮಗೊಂಡೇಶ್ವರನ ಕುರಿತ ಐತಿಹ್ಯವನ್ನು ಐತಿಹಾಸಿಕ ದೃಷ್ಟಿಯನ್ನಿಟ್ಟುಕೊಂಡು ನೋಡುವುದೇ ಲೇಸು. ಬೊಮ್ಮಗೊಂಡೇಶ್ವರನ ಕುರಿತ ದೊರೆತ ಐತಿಹ್ಯಗಳೆಂದರೆ -

☞ ದುಷ್ಟ ಗೋಸಾಯಿಯನ್ನು ಸಂಹರಿಸಿದ ಐತಿಹ್ಯ

☞ ಬಹುಮನಿ ಅರಸ ಸುಲ್ತಾನ-ಎ-ಅಹಮದಷಾನನ್ನು ನೀರು ಕುಡಿಸಿದ ಐತಿಹ್ಯ

☞ ಓರಂಗಲ್ಲಿನ ಕಾಕತಿಯ ಅರಸನಿಗೆ ಸಹಾಯ ಕುರಿತ ಐತಿಹ್ಯ

---

**ಅಡಿ ಟಿಪ್ಪಣಿ :**

೯. 'ಬೀದರ ಜಿಲ್ಲಾ ದರ್ಶನ' ಸಂ. ಡಾ|| ಜಗನ್ನಾಥ ಹೆಬ್ಬಾಳೆ, ಪು.೧.

ಬೀದರ ಜಿಲ್ಲೆಯಲ್ಲಿ ಬೊಮ್ಮಗೊಂಡೇಶ್ವರ ಒಬ್ಬ ಮಹಾತ್ಮನಾಗಿ ಮೆರೆದಿದ್ದಾನೆ. ತನ್ನ ಜನಾಂಗ ಹಾಗೂ ಪ್ರದೇಶದ ಜನತೆಗಾಗಿ ಅನೇಕ ಪವಾಡಗಳನ್ನು ಮಹತ್ವದ ಕಾರ್ಯಗಳನ್ನು ಎಸಗಿ ಜನಪದರ ಮನಸ್ಸಿನ ಮೇಲೆ ಅಚ್ಚಳಿಯದ ಛಾಪನ್ನು ಬೀರಿದ್ದಾನೆ. ಬೊಮ್ಮಗೊಂಡೇಶ್ವರ ಕುರಿತು ಐತಿಹ್ಯ ಒಂದನ್ನು ಖಿಲಾ (ಕೋಟೆ) ಒಳಗಡೆ ಇರುವ ಕಾಳಿಕಾದೇವಿಯ ಗುಡಿಯನ್ನು ಹಿನ್ನಲೆಯಾಗಿಟ್ಟುಕೊಂಡು ಹೇಳುತ್ತಾರೆ.

**ದುಷ್ಟ ಗೋಸಾಯಿಯನ್ನು ಸಂಹರಿಸಿದ ಐತಿಹ್ಯ :**

''ಬೀದರನಲ್ಲಿ ಕೋಟೆ ನಿರ್ಮಾಣವಾಗುವ ಮುಂಚೆ ಈ ಪ್ರದೇಶ ಘಟದಿಂದ ಆವರಿತವಾಗಿತ್ತು. ಅಲ್ಲಿ ಬೊಮ್ಮಗೊಂಡ ಎಂಬ ಕುರುಬ ನಾಯಕ ದಿನಾ ಕುರಿಗಳನ್ನು ಮೈಯಿಸುತ್ತದ್ದನು. ಅಲ್ಲಿ ಒಂದು ಚಿಕ್ಕ ಗುಂಡ (ಕುಂಡ) ಇತ್ತು. ಅಲ್ಲೆ ತನ್ನ ಕುರಿಗಳಿಗೆ ನೀರು ಕುಡಿಸುತ್ತಿದ್ದ ಸ್ವಲ್ಪ ದೂರದಲ್ಲಿದ್ದ ಕಾಳಿಕಾದೇವಿ ಗುಡಿಗೆ 'ಗೋಸಾಯಿ' ಎಂಬ ಒಬ್ಬ ಸಿದ್ದಿ ಪುರುಷ ಬಂದ. ಬೊಮ್ಮಗೊಂಡ ಕೂಡ ಒಬ್ಬ ಸಿದ್ಧಿಪುರುಷನಾಗಿದ್ದಾನೆಂದು ಅವನು ತಿಳಿದುಕೊಂಡಿದ್ದ. ಹೇಗಾದರೂ ಮಾಡಿ ಬೊಮ್ಮಗೊಂಡನ ವಿಶ್ವಾಸನ್ನು ಸಂಪಾದಿಸಿ ತನ್ನ ಹೋಮಕ್ಕೆ ಬಲಿಕೊಟ್ಟು ಬಂಗಾರದ ಪುತ್ಥಳಿಯನ್ನಾಗಿ ಮಾಡಬೇಕು ಎಂದು ಅಂದುಕೊಂಡನು. ಹೀಗೆ ಒಂದು ದಿವಸ ಬೊಮ್ಮಗೊಂಡನಿಗೆ ಕರೆದು ನಾನ್ನೊಂದು ಹೋಮ ಮಾಡಬೇಕು ಅದಕ್ಕೆ ಸಹಕಾರ ಬೇಕು ಎಂದು ಕೇಳಿಕೊಂಡ. ಆಗ ಬೊಮ್ಮಗೊಂಡ ಈ ಹೋಮದಿಂದ ಏನು ಪ್ರಯೋಜನ? ಇದು ಯಾಕೆ ಮಾಡ್ಬೇಕು? ಎಂದು ಪ್ರಶ್ನೆ ಹಾಕಿದ. ಅದಕ್ಕೆ ಕುಟಿಲ ಗೋಸಾಯಿ ಹೀಗೆ ಹೇಳ್ತಾನೆ. 'ಈ ಹೋಮದಿಂದ ನಮಗೆ ದೇವರು ಕಣ್ಣಿಗೆ ಕಾಣಿಸ್ತಾನ ಜೊತೆಗೆ ಮಳೆ, ಬೆಳೆ ಚೆನ್ನಾಗಿ ಆಗ್ತದೆ ಜನರು ಸುಖವಾಗಿ ಬಾಳ್ತಾರೆ' ಎಂದು ಉತ್ತರಿಸುತ್ತಾನೆ. ಸರಳ ಮನಸ್ಸಿನವನಾದ ಬೊಮ್ಮಗೊಂಡ ಪರಮಾತ್ಮನನ್ನು ಕಾಣುವ ಹಂಬಲದಿಂದ ಜೊತೆಗೆ ಮೇಲಿಂದ ಮೇಲೆ ಬೀಳುತ್ತಿರುವ ಬರಗಾಲದಿಂದ ಪಾರಾಗಿ ಜನರಿಗೆ ಒಳ್ಳೆದಾಗಬಹುದು ಎಂಬ ದೃಷ್ಟಿಯಿಂದ ಗೋಸಾಯಿಯ ಮಾತನ್ನು ಒಪ್ಪಿಕೊಳ್ಳತ್ತಾನೆ. 'ಹೇಳು ಈ ಧರ್ಮ ಕಾರ್ಯಕ್ಕೆ ನನ್ನಿಂದ ಏನು ಸಹಾಯ ಬೇಕು ಕೇಳು ಎನ್ನುತ್ತಾನೆ'. ಅದಕ್ಕೆ ಗೋಸಾಯಿ ನೀನೊಬ್ಬ ಕುರಿ ಕಾಯುವ ಕುರುಬ (ಗೊಂಡ) ಕುರಿ ಕಾಯುವಾಗ ನಿನಗೆ ಅನೇಕ ಜಾತಿಯ ಗಿಡಗಳು ಜಡಿಬೂಟಿಗಳು ಎಲೆ-ಕಾಯಿ-ಹೂಗಳು ಕಾಣಿಸುತ್ತವೆ. ನಾ ಹೇಳುವ ಎಲ್ಲ ರೀತಿಯ ಗಿಡದ ಕಟ್ಟಿಗೆಗಳನ್ನು ಸಂಗ್ರಹಿಸಿ ನನಗೆ ತಂದು ಕೊಡು ಎಂದು ಹೇಳಲು ಇದೊಂದು ಧರ್ಮ ಕಾರ್ಯವೆಂದು ನಂಬಿ ಕೆಲವು ದಿನಗಳಲ್ಲಿಯೇ ಅವುಗಳ್ನು ಸಂಗ್ರಹಿಸಿ ಗೋಸಾಯಿಗೆ ಕೊಟ್ಟ ಎಂಬ ಪ್ರತೀತಿ ಇದೆ.

ಗೋಸಾಯಿ ಹೋಮದ ತಯಾರಿ ನಡೆಸಿದ. ಗೋಸಾಯಿ ಮನಸ್ಸಿನಲ್ಲಿ ನಡೆಯುವ ತಂತ್ರವೇ ಬೇರೆಯಾಗಿತ್ತು. ಹೇಗಾದರೂ ಮಾಡಿ ಈ ಹೋಮಕ್ಕೆ ಬೊಮ್ಮಗೊಂಡನಿಗೆ ಬಲಿಕೊಟ್ಟು ಬಂಗಾರದ ಪುತ್ಥಳಿಯಾಗಿ ಮಾಡಿ ಅದನ್ನು ತನ್ನ ವಶದಲ್ಲಿಟ್ಟುಕೊಳ್ಳಬೇಕೆಂದಿದ್ದ ಇದರ ಯಾವುದೇ ಸುಳಿವೇ ಇರದ ಬೊಮ್ಮಗೊಂಡ ಎಲ್ಲ ರೀತಿಯ ಸಹಾಯ ಮಾಡಲು ಮುಂದಾದನು. ಇಬ್ಬರೂ ಕೂಡಿಯೇ ಹೋಮದ ತಯಾರಿ ಮಾಡಿದರು ಹೋಮದ ಸಂದರ್ಭದಲ್ಲಿ ಬೊಮ್ಮಗೊಂಡನಿಗೆ ತನ್ನ ಜೊತೆಯಲ್ಲೆ ಇರಲು ಹೇಳಿದ. ಇಬ್ಬರು ಸ್ನಾನ ಮಾಡಿ ಹೋಮವನ್ನು ಸುಡ ತೋಡಗಿದರು. ಹೋಮಕ್ಕೆ ಸುತ್ತು ಹಾಕುವ

ನೆಪದಿಂದ ಬೊಮ್ಮಗೊಂಡನಿಗೆ ಎದ್ದು ಸುತ್ತು ಹಾಕಲು ಹೇಳಿದ, ಒಂದೇರಡು ಸುತ್ತು ಹಾಕುವ ಹೊತ್ತಿಗೆ ಗೋಸಾಯಿ ಬೊಮ್ಮಗೊಂಡನಿಗೆ ಎತ್ತಿ ಹೋಮಕ್ಕೆ ಹಾಕಲು ಪ್ರಯತ್ನಿಸಿದ. ದಿಗ್ಭ್ರಮೆಗೊಂಡ ಬೊಮ್ಮಗೊಂಡ ತನ್ನನ್ನು ಬೆಂಕಿಗೆ ಹಾಕಲು ನೋಡುತ್ತಿರುವ ಗೋಸಾಯಿಗೆ ಕಾಯದೇ ಇವನೆ ಅವನನ್ನು ಹೋಮಕ್ಕೆ ನೂಕಿದ. ಕಂಗಾಲಾದ ಗೋಸಾಯಿ ಅಲ್ಲೆ ಇರುವ ಗಿಡ ಮೂಲಿಕೆ ರಸವನ್ನು ತನ್ನ ಮೇಲೆ ಎರಚುವುದಾಗಿ ಹೇಳಿದ. ರಸ ಅವನ ಮೇಲೆ ಎರಚುವಷ್ಟರಲ್ಲಿಯೇ ಕೆಲವೇ ಕೆಲವು ಕ್ಷಣಗಳಲ್ಲಿ ಗೋಸಾಯಿ ಬಂಗಾರದ ಮೂರ್ತಿಯಾಗಿ ಪರಿವರ್ತನೆಗೊಂಡ.'[೧೦]

ಈ ರೀತಿ ಐತಿಹ್ಯ ಒಂದನ್ನು ಬೀದರ ಜಿಲ್ಲೆಯಲ್ಲಿ ಜನಪದರು ಹೇಳುತ್ತಾರೆ. ಕಥೆ ರೂಪದಲ್ಲಿರುವ ಈ ಐತಿಹ್ಯಕ್ಕೆ ಐತಿಹ್ಯ ಎಂದು ಕರೆಯಬಹುದೇ? ಕಥೆಯಿಂದ ಐತಿಹ್ಯ ಎಷ್ಟರ ಮಟ್ಟಿಗೆ ಬೇರ್ಪಡಿಸಲು ಸಾಧ್ಯ ಎಂಬುದನ್ನು ವಿಚಾರ ಮಾಡುವಂಥ ವಿಷಯ. ಕಥೆಗಳಲ್ಲಿ ಎಲ್ಲವೂ ಕಾಲ್ಪನಿಕ ಅದು ಒಂದು ಊರು ಇರಲಿ, ವ್ಯಕ್ತಿ ಇರಲಿ, ಸ್ಥಳ ಇರಲಿ ಯಾವುದೇ ಒಂದು ವಿಷಯವು ಇತಿಹಾಸದಲ್ಲಿ ನಡೆದು ಹೋದದ್ದಾಗಿರುವುದಿಲ್ಲ. ಆದರೆ ಐತಿಹ್ಯ ಮಾತ್ರ ಊರು, ವ್ಯಕ್ತಿ, ಸ್ಥಳ ಇವುಗಳಲ್ಲಿ ಯಾವುದಾದರೊಂದು ಇತಿಹಾಸಕ್ಕೆ ಸಂಬಂಧ ಪಟ್ಟದ್ದಾಗಿರುತ್ತದೆ. ಕಥೆ ಮತ್ತು ಐತಿಹ್ಯಗಳಲ್ಲಿ ಕೂದಲೆಳೆಯಷ್ಟು ಮಾತ್ರ ಅಂತರವನ್ನು ಕಂಡುಕೊಳ್ಳಬಹುದಾಗಿದೆ. ಈ ಮೇಲಿನ ಕಥೆಗಳಲ್ಲಿ ಐತಿಹ್ಯ ಎಂದು ಹೇಳಬಹುದಾದ ಕೆಲವು ಸಂಗತಿಗಳು ಹುದುಗಿಕೊಂಡಿವೆ. ಜೊತೆಗೆ ಕಾಲ್ಪನಿಕ ಕಥೆಗಳ ಸ್ವರೂಪಗಳು ಕೂಡ ಬೆನ್ನು ಹತ್ತಿ ಬಂದಿವೆ ಎಂದರೂ ತಪ್ಪಾಗಲಾರದು. ಐತಿಹ್ಯ ಹಾಗೂ ಸಾಮಾನ್ಯ ಕಥೆಗಳ ನಡುವೆ ಗೆರೆ ಎಳೆದಂತೆ ಸ್ಪಷ್ಟವಾದ ವ್ಯತ್ಯಾಸವನ್ನು ಗುರುತಿಸಲು ಸಾಧ್ಯವಾಗದಿದ್ದರೂ ಸ್ಥೂಲ ವಿಭಜನೆಗೆ ಸಾಧ್ಯತೆ ಇದ್ದೇ ಇರುತ್ತದೆ.

''ವ್ಯಕ್ತಿಗಳಿಗೆ, ಸ್ಥಳಗಳಿಗೆ, ಘಟನೆಗಳಿಗೆ ಸಂಬಂಧಿಸಿದಂತೆ ಯಾವುದೇ ನಿರ್ಧಿಷ್ಟ ಹಿನ್ನಲೆಯಲ್ಲಿ ಹುಟ್ಟಿಕೊಳ್ಳುವ ಕತೆಗಳು ಐತಿಹ್ಯಗಳು. ನಿಜವಾಗಿ ನಡೆದ ಘಟನೆಗಳೇ ಎಂಬಂತೆ ಪ್ರಕೃತಿಯ ಯಾವುದೋ ಅದ್ಭುತವನ್ನು ವೈಚಿತ್ರ್ಯವನ್ನು ಸಾಕ್ಷಿಯಾಗಿ ತೋರುತ್ತಾ ಎಡೆಗೆ ಕತೆಗಳು ಆರೋಪಿಸಲ್ಪಡುತ್ತವೆ. ಅಲ್ಲಿ ಯಾವುದೋ ಅತಿಶಯದ ಘಟನೆ ನಡೆದಿರಲೇಬೇಕು ಅಥವಾ ಅಂತಹದೇ ಸ್ಥಳಕ್ಕೆ ಇನ್ನೆಲ್ಲಿಯಾದರೂ ಒಂದು ಕತೆ ಆರೋಪಿತವಾಗಿರಬೇಕು. ಐತಿಹ್ಯಗಳು ಅನೇಕ ಸಂದರ್ಭಗಳಲ್ಲಿ ಕಾಲ್ಪನಿಕವೇ ಆದರೂ ಐತಿಹಾಸಿಕ ಸತ್ಯ ಕೆಲವು ಕಡೆಗಳಲ್ಲಾದರೂ ಇದ್ದೆ ಇರುತ್ತವೆ. ಯಾವುದೋ ವಾಸ್ತವಿಕ ಘಟನೆಯ ಆಧಾರದ ಮೇಲೆಯೇ ಈ ಕಥೆಗಳು ಬೆಳೆದುಕೊಂಡಿವೆ ಎನ್ನುವುದು ಕಂಡು ಬರುತ್ತದೆ. ಅದಕ್ಕೆ ಪ್ರಕೃತಿಯ ಯಾವುದೋ ವಿಲಕ್ಷಣ ಸ್ವರೂಪ ಸಾಕ್ಷಿಯಾಗಿರುತ್ತದೆ.'[೧೧] ಬೊಮ್ಮಗೊಂಡೇಶ್ವರ ಕುರಿತ ಈ ಕಥೆ ಕೂಡ ಐತಿಹ್ಯವೆಂದು ಪರಿಗಣಿಸಬೇಕಾಗುತ್ತದೆ. ಏಕೆಂದರೆ ಇಲ್ಲಿ ಬರುವ ವ್ಯಕ್ತಿ ಒಂದು ಕಾಲದಲ್ಲಿ ಬದುಕಿ ಬಾಳಿದಂತವನೆ ಜೊತೆಗೆ ಇಲ್ಲಿ ಬರುವ ಕಾಳಿಕಾದೇವಿಯ ಗುಡಿಯ ಪ್ರಸ್ತಾಪ ಐತಿಹ್ಯವೆಂಬುದಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ. ಬೀದರ ಕೋಟೆಯೊಳಗಡೆ ಇರುವ

---

**ಅಡಿ ಟಿಪ್ಪಣಿ :**

೧೦. ಶಾಂತಲಿಂಗ ಸ್ವಾಮಿ ಲಾಡಗೇರಿ (೬೨), ಬೀದರ.

೧೧. 'ಜೀಶಂಪರವರ ಜಾನಪದ ಬರಹಗಳು' ಸಂ. ಪ್ರೊ। ಕಾಳೇಗೌಡ ನಾಗವಾರ, ಅಂಬಳಿಕೆ ಹಿರಿಯಣ್ಣ, ಪು. ೫೬.

ಬೊಮ್ಮಗೊಂಡೇಶ್ವರನ ಕೆರೆಯ ಸಮೀಪದಲ್ಲಿ ವೀರಸಂಗಯ್ಯನ ಗುಡಿ, ಕಾಳಿಕಾದೇವಿಯ ಗುಡಿ ಇವು ಎಲ್ಲವೂ ಈ ಕಥೆಯನ್ನು ಐತಿಹಾಸಿಕ ಒರೆಗೆ ಹಚ್ಚಿ ನೋಡಲು ಪ್ರೇರೇಪಿಸುವುದರ ಮೂಲಕ ಐತಿಹ್ಯವೆಂಬುದನ್ನು ಖಚಿತಪಡಿಸುತ್ತದೆ.

ಬೊಮ್ಮಗೊಂಡೇಶ್ವರನ ಕುರಿತ ಮೇಲಿನ ಐತಿಹ್ಯದಿಂದ ತಿಳಿದು ಕೊಳ್ಳುವುದಿಷ್ಟೇ. ಧರ್ಮಾಂಧನಾದ ಗೋಸಾಯಿಯನ್ನು ಸುಟ್ಟು ಸಹಜ ಧರ್ಮವಂತನಾಗಿ ಈತ ಮೆರೆದಿದ್ದಾನೆ. ಅಷ್ಟೇ ಅಲ್ಲ ನಿಧಿಯ ಆಸೆಗೆ ಬಿದ್ದು ನರಬಲಿಯನ್ನು ಕೊಡಲು ಹೊರಟ ವ್ಯಕ್ತಿಯನ್ನು ಬಲಿಗೆ ತಳ್ಳಿದ, ತಳ್ಳಿ ಸೂಕ್ತ ಪಾಠ ಕಲಿಸಿ ತನ್ನ ನಾಡಿನ, ಜನಾಂಗದ ನಾಯಕನಾಗಿ ಮೆರೆದಿದ್ದಾನೆ. ಜಾಗತೀಕರಣದ ಈ ಸಂದರ್ಭದಲ್ಲಿ ನಿಧಿಗಾಗಿಯೋ ಅಥವಾ ಮೂಢನಂಬಿಕೆಯಿಂದಲೋ ನರಬಲಿಗಳು ನಡೆದೆ ಇವೆ. ಇದು ನಂಬಲಸಾಧ್ಯವಾದರೂ ನೂರಕ್ಕೆ ನೂರರಷ್ಟು ಸತ್ಯವೇ ಆಗಿದೆ. ೧೫ನೇ ಶತಮಾನದ ಹಿಂದೆಯೇ ಈ ನರ ಬಲಿ ಎಂಬ ಸಾಮಾಜಿಕ ಸಮಸ್ಯೆ ಇದ್ದೆ ಇತ್ತು ಎನ್ನಲು, ಈ ಐತಿಹ್ಯ ಒಂದು ಸಾಕ್ಷಿಯಾಗಿ ನಿಲ್ಲುತ್ತದೆ. ಜನಪದ ನಾಯಕ ಇಂದಿಗೂ ಜನಪದರ ನಾಲಿಗೆಯ ಮೇಲೆ ನಲಿದಾಡುತ್ತಿರಲು ಕಾರಣವೆಂದರೆ ಜನಪದರ ಮನಸ್ಸು ಯಾವಾಗಲೂ ಮಾನವ ಧರ್ಮದ ಕಡೆಯೇ ವಾಲಿಕೊಂಡಿರುವುದನ್ನು ನೋಡಬಹುದು.

ಬೊಮ್ಮಗೊಂಡೇಶ್ವರ ಕುರಿತ ಈ ಐತಿಹ್ಯ ಸಾಮಾನ್ಯವಾಗಿಯೇ ಕಾಣುತ್ತದೆ. ಇದರಲ್ಲಿ ಯಾವುದೇ ಉತ್ಪ್ರೇಕ್ಷತೆ ಏನೂ ಇಲ್ಲ. ತನ್ನ ಪ್ರಾಣ ರಕ್ಷಣೆಗಾಗಿ ಕಪಟಿ ಗೋಸಾಯಿಯನ್ನು ಬಲಿ ತೆಗೆದುಕೊಂಡಿರುವುದರಲ್ಲಿ ಯಾವುದೇ ಮಹಾನ್ ಸಾಧನೆ ಏನಿಲ್ಲ ಎನ್ನಬಹುದು. ಆದರೆ ಈ ಅಲ್ಪಕಾರ್ಯವೇ ಅವನಿಂದ ಎಸಗಿದೆ ಮುಂದೆ ಈ ಅಲ್ಪಕಾರ್ಯವೇ ಮಹಾಕಾರ್ಯವಾಗಲು ಏಣಿಯನ್ನು ಹಾಕಿಕೊಟ್ಟಿದೆ. ಕೆಳಗಿನ ಈ ಐತಿಹ್ಯದಿಂದಲೇ ಬೊಮ್ಮಗೊಂಡ 'ಮಹಾತ್ಮ ಬೊಮ್ಮಗೊಂಡೇಶ್ವರ'ನಾಗಿ ಮೆರೆಯುತ್ತಿದ್ದಾನೆ.

ಬೀದರ ಕೋಟೆಯಲ್ಲಿರುವ ಕೆರೆಯೊಂದು ಬೊಮ್ಮಗೊಂಡನ ಕೆರೆ ಎಂದೇ ಪ್ರಚಾರದಲ್ಲಿದೆ. ಬೀದರ ಕೋಟೆ ಹಾಗೂ ಈ ಕೆರೆಯನ್ನು ಹಿನ್ನಲೆಯಾಗಿಟ್ಟುಕೊಂಡು ಐತಿಹ್ಯವನ್ನು ಇಲ್ಲಿಯ ಜನಪದರು ಹೇಳುವರು. ಬೀದರ ಕೋಟೆ ನಿರ್ಮಾಣಕ್ಕೆ ಕಾರಣ, ನಿರ್ಮಿಸಲು ಕೊಟ್ಟ ಸಹಕಾರ ಎಲ್ಲವೂ ಬೊಮ್ಮಗೊಂಡನ ಸುತ್ತ ಹಣೆದ ಐತಿಹ್ಯಗಳು ದಾಖಲೆಗಳನ್ನು ಒದಗಿಸುತ್ತವೆ. ಈ ವಿಷಯವನ್ನು ಇತಿಹಾಸದ ಒರೆಗೆ ಹಚ್ಚಿ ನೋಡುವ ಕಾರ್ಯ ನಡೆದೇ ಇಲ್ಲ ಎನ್ನಬಹುದು. ಒಳಕೋಟೆಯಲ್ಲಿರುವ ಕೆರೆಗೆ ಬೊಮ್ಮಗೊಂಡನ ಕೆರೆ ಎಂದೇ ಕರೆಯುವ ವಾಡಿಕೆ ಇದೆ. ಈ ಕೆರೆಯಲ್ಲಿ ನೀರು ಎಲ್ಲಿಂದ ಬರುತ್ತವೆ ಎನ್ನುವುದು ಯಾರಿಗೂ ತಿಳಿದಿಲ್ಲ. ಜೊತೆಗೆ ಇಲ್ಲಿನ ನೀರು ಎಂದೂ ಬತ್ತಿ ಹೋಗುವುದಿಲ್ಲ.

ಹಿಂದೆ ಒಂದಾನೊಂದು ಕಾಲದಲ್ಲಿ ಚಿಕ್ಕ ಕುಲುಮೆಯೊಂದಿತ್ತು ಆ ಕುಲುಮೆಯಿಂದಲೇ ಬೊಮ್ಮಗೊಂಡ ನೀರಡಿಸಿ ಬಂದ ಅರಸನಿಗೂ ಹಾಗೂ ಅವನ ಸಹಸ್ರ ಸೈನಿಕರಿಗೆ, ಕುದುರೆ, ಆನೆಗಳಿಗೆ ಈ ಚಿಕ್ಕ ಕುಲುಮೆಯಿಂದಲೇ ನೀರನ್ನು ಕುಡಿಸಿದ ಎನ್ನುವುದು ಒಂದು ಐತಿಹ್ಯ. ಈ ಐತಿಹ್ಯವನ್ನು ಗೊಂಡ ಜನಪದರ ಬಾಯಿಂದಲೇ ಕೇಳಿದರೆ ಸೊಗಸು ಜೊತೆಗೆ ಭಾಷಾ ಸೊಗಡು ಇಮ್ಮಡಿ ಎನಿಸುತ್ತದೆ. ಅದು ಹೀಗಿದೆ.

**ಬಹುಮನಿ ಅರಸ ಸುಲ್ತಾನ-ಎ-ಅಹಮದಷಾನನ್ನು ನೀರು ಕುಡಿಸಿದ ಐತಿಹ್ಯ :**

''ಬೊಮ್ಮಗೊಂಡ ಒಂದಿನ ಕ್ವಾಟಿ (ಬೀದರ) ಘಟದಾಗ ಕುರಿ ಮೈಸ್ಕೋತ ಇದ್ದ. ಒಂದ ದಿನ ಕರ್‌ರ್‌ರ್... ಅಂತ ಬ್ಯಾಸಗಿ ಬಿಸ್ಲಾಗ್ ತುರುಕ್ ರಾಜ ತನ್ನ ದಂಡಿನ ಸಂಗಟ ಬ್ಯಾಟ ಆಡ್ಕೊತ ಬಂದುನ್ ಬ್ಯಾಸಗಿ ಬಿಸಲಾಗ ರಾಜಾ ಸಮೇತ ದಂಡಿಗ ದಂಡ ನಿರಡ್ಸಿ ಹೋಯ್ತು. ಅಡಿಗ ಅಡೀ ಕೆಳಗಾ ಮ್ಯಾಲ ಮಾಡದೂರಭಿ, ಹನಿ ನೀರ ಸಿಗಲ್ಹೋದ್ವು ಎಲ್ಲೋರು ಹೈರಾಣ ಆಗಿ ಬಾಯಿ ಒಣಗುಸ್ಕೊಂಡು ಕುಂತುರ್, ಜರಾ ನಿಂತ ಒಬ್ಬ ಕುರಿ ಕಾಯಿಸಕೋತ ಹೊಂಟಿನು ಅಂವ ಬೊಮ್ಮಗೊಂಡ ಇದ್ದ ಈ ಕುರಿ ಕಾಯಾ ಕುರುಬುಗ್ ಕೇಳ್ದೂರ್ ನೀರ್ ಸಿಕ್ಕುರ್ ಭಿ ಸಿಗ್ತವ್, ಅಂತ ಹೇಳಿ ದಂಡಿನಗಿಂದ ಇಬ್ಬರು ಹೋಗಿ ಏನಪ್ಪ ಇಲ್ಲಿ ಕುಡಿಲಾಕ ಎಲ್ಯಾರ ನೀರ್ ಸಿಗ್ತವೇನು ನಾವೆಲ್ಲ ಬಕ್ಕೊಳ ನಿರಡ್ಸಿ ಹೋಗಿದೆವು ಅಂತ ಕೇಳ್ದುರು.

ಆವಾಗ ಬೊಮ್ಮಗೊಂಡ ಇಸ್ ಮಂದಿ ಎಂದಿಲ್ದ ಇಗೊತ್ತ ಯ್ಯಾಕ್ ಬಂದಿರಬೇಕು, ಅಂತ ಮನಸಿನಾಗ ಅಂದು 'ಕೊಲ ಕಾಣಸಾದ ಅಕಾಡಿ ಒಂದು ಬಂಡ್ಗಲ್ ಅದ ಅದಕ ಸುರುಸ್ದುರ ನೀರಿನ ಚಿಲುಮಿ ಅದ ಹೋಗ್ರಿ, ಎಲ್ಲೋರು ಕುಡಿ ಹೋಗ್ರಿ, ಅಂದುರ್' ಆಗ ಮಂದಿಯೆಲ್ಲ ಇಲ್ಲ ನಾವು ಹಾಜಾರೋ ಮಂದಿದ ದಂಡ ಅದ ಆನಿ, ಕುದರಿ, ಬ್ಯಾರೆ ಇಸ್ ಮಂದಿಗಿ ಚಿಲ್ಮಿದಗಿಂದ ನೀರ ಹ್ಯಾಂಗ್ ಸಾಕಾಯ್ತವ? ಅಂತ ಕೇಳ್ದುರ್ ಆಗ ಬೊಮ್ಮಗೊಂಡ ಎಲ್ಲ ಸಾಕಾಯ್ತವ ಹೋಗ್ರಿ ಅಮದುರ. ಎಲ್ಲೋರು ಆ ಕಡಿ ನೀರ ಕುಡಿಲಾಕ ಹೋದುರ.

ಬೊಮ್ಮಗೊಂಡ ಹೇಳ್ದಂಗೆ ಅಲ್ಲಿ ಒಂದು ಬಂಡೆಗಲ್ಲ ಇತ್ತು. ಏಟ್ ಹೊಳ್ಳುಸ್ಲಕ್ ಹೋದುರ ಭೀ ಬಂಡಿಗಲ್ ಹಲ್ಕಸಲ್ದೆ ಹೋಯ್ತು. ಕಡಿಗಿ ಆನಿ ಕುದರಿದಿಂದ ಏಳುದುರ ಭೀ, ಬಂಡಿಗಲ್ ಹೊಳ್ಳಲ್ದೆ ಹೊಯ್ತು. ಆಗ ಮತ್ ನಾಕೈದ ಮಂದಿ ಬೊಮ್ಮಗೊಂಡನ ಬಲ್ಲಿ ಬಂದು ಬಂಡಗಲ್ ಸರ್ಸಲಾಕ್ ಬರಲ್ದ ಹೋಗ್ಯಾದ ಅಂತ ಹೇಳ್ದುರ್ ಇಸ್ ಮಂದಿಗಿ ಸರುಸ್ಲಕ ಬರಲ್ದ ಹೋಗ್ಯಾದ, ನನಗೇನ ಬರ್ತುದ ಅನ್ಕೋತ ಅವರ ಸಂಗಟ ಚಿಲ್ಮಿ ಬಲ್ಲಿ ಬಂದು ತನ್ನ ಬಲ್ಲಿ ಇದ್ದಿಂದ ಕುರಿ ಕಾಯಾದ ಒಂದ ಬಡಗಿ ತೊಗೊಂಡ ಬಂಡ್ಗಲ್ ಬುಡಕ್ ಹಾಕಿ ಎತ್ತುದುರ ಅದು ಬಾಜಿಗ ಸರ್ದು ನೀರ ಬರಲಾಕ್ ಸುರು ಮಾಡ್ದುವು. ರಾಜಾ ಸಮೇತ ಎಲ್ಲೋರು ಪರೇಷಾನ್ ಆಗಿ ನೋಡ್ದುರ್ ಕಡೀಗಿ ನೀರ ಸಿಕ್ಕು ಅಲ ಅಂತ ಎಲ್ಲೊರಿಗಿ ಖುಷಿ ಆಯ್ತು. ಎಲ್ಲೋರು ದಣ್ಯಸ್ತನ ನೀರ ಕೊಂಡುರ ಭೀ ಖಲಾಸ ಆಗಲ್ದೆ ಹೋದುವು. ರಾಜರು ನಿಮ್ಮ ಉಪಕಾರ ಭಾಳ ಆಯ್ತು ಅಂತ ಹೇಳ್ದುರ್.'[೧೨]

ಈ ತರಹದ ಐತಿಹ್ಯ ಒಂದು ಬೀದರನಲ್ಲಿ ಪ್ರಚಾರವಿದೆ. ಸುಲ್ತಾನ್-ಎ-ಅಹಮದಷಾನು ಬಾಯಾರಿ ಬಂದ ನಮ್ಮೆಲ್ಲರಿಗೂ ನೀರು ಕುಡಿಸಿದಕ್ಕೆ ಇದರ ಪ್ರತಿಯಾಗಿ ಏನಾದರೂ ನಿನಗೆ ಬೇಕಾದರೆ ಬೇಡು ಎಂದ ಕೇಳಿದನಂತೆ ಆದಕ್ಕೆ ಬೊಮ್ಮಗೊಂಡ ನಾನೊಬ್ಬ ಸಾಧಾರಣ ಕುರಿ ಕಾಯೋ ಕುರುಬ ನಾನು ಇದ್ದಷ್ಟರಲ್ಲೇ ಸುಖವಾಗಿದ್ದೇನೆ ನನಗೇನು ಬೇಡ ಎಂದನಂತೆ, ಆಗ ಸುಲ್ತಾನ ಇಲ್ಲ ನೀನು

---

**ಅಡಿ ಟಿಪ್ಪಣಿ :**

೧೨. ನಾಗಪ್ಪವಗ್ಗೆ, ಚಳಕಾಪುರ ವಾಡಿ (೮೦) ಬೀದರ.

ಏನಾದರೂ ಕೇಳಲೇಬೇಕು ಎಂದು ಹಟ ಹಿಡಿದಾಗ, ಕೊಡುವುದಾದರೆ ನಮ್ಮ ಜನಾಂಗಕ್ಕಾಗಿ ಏನಾದರೂ ಕೊಡಿ. ನಮ್ಮ ಕುರಿಗಳನ್ನು ಮೇಯಿಸುವುದಕ್ಕಾಗಿ ಗಾಯಿಮಳ, ಗೋಮಳ, ಪೆರಂಪೊಕಗಳನ್ನು ಇಂತಿಷ್ಟು ಸ್ಥಳವನ್ನು ನಿಗದಿ ಮಾಡಿಕೊಡಿ ಮತ್ತು ಕುರಿಗಳನ್ನು ಎಲ್ಲೇ ಮಾರಿದರೂ ಚಿಟ್ಟಿ (ಟೆಕ್ಸ) ಇರಂತೆ ಮಾಡಿ. ಸತ್ತ ಕುರಿಗಳನ್ನು ಎಲ್ಲೆ ಮಾರಿದರೂ ಚಿಟ್ಟಿ ಇರದಂತೆ ಮಾಡಿ ಸತ್ತ ಕುರಿ ಹೊತ್ತು ಮಾರುವಮತಾಗಬೇಕು ಎಂದು ಹೇಳಿದರಂತೆ. ಇದಕ್ಕೆ ಸುಲ್ತಾನರು ಒಪ್ಪಿಕೊಂಡು ಬೊಮ್ಮಗೊಂಡನ ಕೈಮೇಲೆ ಕೈಯನಿಟ್ಟು ಭರವಸೆ ಕೊಟ್ಟರೆಂಬುದು ಈ ಐತಿಹ್ಯದಿಂದ ತಿಳಿದು ಬರುತ್ತದೆ.

''ಮೊಲವೇ ನಾಯಿಯನ್ನು ಬೆನ್ನಟ್ಟಿ ಕೊಂದ ಘಟನೆಯನ್ನು ಕಣ್ಣಾರೆ ಕಂಡ ಸುಲ್ತಾನ-ಎ-ಅಹಮದಷಾನು ಇಲ್ಲಿನ ಭೂಗುಣವೇನು? ಇಲ್ಲಿನ ಇತಿಹಾಸ ಕುರಿತು ನಮಗೆ ತಿಳಿಸುವಿರಾ? ಎಂದು ಕೇಳಿದಾಗ, ಈ ನಾಡು ಪುಣ್ಯದ ನಾಡು ಇಲ್ಲಿ ಅನೇಕ ಶಿವಭಕ್ತರಾಗಿ ಹೋಗಿದ್ದಾರೆ. ಇಲ್ಲೇ ಸಮೀಪದಲ್ಲಿ ವೀರಸಂಗಯ್ಯಾರ ಗದ್ದುಗೆ ಇದೆ. ಹಿಂದೆ ವೀರಸಂಗಯ್ಯಾ ಎಂಬ ಹಿಂದೂ ರಾಜರಿದ್ದರು. ಅವರ ಕಾಲದಲ್ಲಿ ಭಾಲ್ಕಿಯಲ್ಲಿ ಚೌಳರಾವ, ಕೋಹಿರದಲ್ಲಿ ಭಾಸ್ಕರರಾವ, ಚಾಳಕಿಯಲ್ಲಿ ಚೋಳರಾವ, ಚಿಂಚೋಳಿಯಲ್ಲಿ ಸಿಂಧೂ ಬಲ್ಲಾಳರಾವ ಮತ್ತು ಕಲ್ಯಾಣದಲ್ಲಿ ಬಿಜ್ಜಳರಾವ ರಾಜರಿದ್ದರು. ಇಲ್ಲಿ ಹೇಳಲಿಕ್ಕಾಗದಷ್ಟು ದೊಡ್ಡ ದೇವಸ್ಥಾನಗಳಿದ್ದವು ಎಂದು ಬೊಮ್ಮಗೊಂಡ ಇಲ್ಲಿನ ಇತಿಹಾಸ ಕುರಿತು ಮಾಹಿತಿಯನ್ನು ಒದಗಿಸುತ್ತಾನೆ. ಈ ವಿಷಯ 'ಸುಲ್ತಾನ ಸುರಳಿ'ಯಿಂದ ನಮಗೆ ಗೊತ್ತಾಗುತ್ತದೆ. ಇಲ್ಲಿನ ಸ್ಥಳೀಯ ವಿಷಯವನ್ನೆಲ್ಲ ತಿಳಿದುಕೊಂಡ ಸುಲ್ತಾನ-ಎ-ಅಹಮದಷಾ ಇಲ್ಲೊಂದು ಕೋಟೆ ಕಟ್ಟಿ ಅದಕ್ಕೆ ಜಾಫರಾಬಾದ ಅಥವಾ ಬೀದರ ಕ್ವಾಟಿ ಎಂದು ಕರೆಯಲಾರಂಭಿಸಿದರು. ಮುಂದೆ ರಾಜ್ಯ ತುಂಬಾ ವಿಸ್ತಾರವಾಗಿ ಬೆಳೆಯಿತು. ಈ ಸುಲ್ತಾನ ಹಸನ್ ಗಂಗು ಬಹಮನಿ ಬಾದಶಾಹ ಸುಲ್ತಾನ-ಎ-ಅಹಮದಷಾ ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆದನು.'[೧೩]

ಬೀದರ ಕೋಟೆ ನಿರ್ಮಾಣ ಸಂದರ್ಭದಲ್ಲಿ ಹಣದ ಕೊರತೆಯಿಂದಾಗಿ ಕೋಟೆ ಕಟ್ಟಡ ಕಾರ್ಯ ನಿಲ್ಲುವಂತಾಗಲೂ ಬೊಮ್ಮಗೊಂಡನು ತನ್ನಲ್ಲಿರುವ ಬಂಗಾರದ ಪುತ್ಥಳಿಯನ್ನು ದಿನಾಲೂ ಸ್ವಲ್ಪ ಸ್ವಲ್ಪವೇ ಕಟಿದು ಸುಲ್ತಾನನಿಗೆ ಕೊಡುತ್ತಿದ್ದನಂತೆ. ಈ ವಿಷಯ ಇಲ್ಲಿಯ ಜನರು ಇಂದೋ ನಿನ್ನೆಯೋ ನಡೆದಂತೆ ವಿವರಿಸುತ್ತಾರೆ. ಬೊಮ್ಮಗೊಂಡನೆಸಗಿದ ಕಾರ್ಯ ಜನಪದರ ಮನಸ್ಸಿನ ಮೇಲೆ ಬೇರೂರಿ ನಿಂತು ಅವನನ್ನು ನಾಯಕನಾಗಿ ಅಷ್ಟೇ ಅಲ್ಲ ದೈವತ್ವಕ್ಕೂ ಏರಿಸಿ ನಿಲ್ಲಿಸಿದ್ದನ್ನು ಇದರಿಂದ ನಮಗೆ ಗೊತ್ತಾಗುತ್ತದೆ.

**ಓರಂಗಲ್ಲಿನ ಕಾಕತೀಯ ಅರಸನಿಗೆ ಸಹಾಯ ಮಾಡಿದ ಐತಿಹ್ಯ :**

ಬೊಮ್ಮಗೊಂಡೇಶ್ವರನ ಕುರಿತು ಇನ್ನೊಂದು ಐತಿಹ್ಯ ಪ್ರಚಾರದಲ್ಲಿದೆ. ಅದೆಂದರೆ ''ಓರಂಗಲ್ಲಿನ ಕಾಕತೀಯ ಅರಸ ತನ್ನ ರಾಜ್ಯದಲ್ಲಿ ಬಿದ್ದ ಅಕಾಲ ಕ್ಷಾಮದಿಂದ ತತ್ತರಿಸಿ

---

**ಅಡಿ ಟಿಪ್ಪಣಿ :**

೧೩. 'ಸುಲ್ತಾನ ಸುರುಳಿ' ಡಾ|| ಕೆ.ಎಂ. ಮೈತ್ರಿ, ಪು. ೨೫.

ಬೊಮ್ಮಗೊಂಡನಲ್ಲಿಗೆ ಸಲಹೆ ಸೂಚನೆಗಾಗಿ ಭೇಟಿ ಮಾಡಲು ಬಂದ. ತನ್ನ ಸ್ಥಿತಿ ಕುರಿತು ಹೇಳಿ ತಾವು ಎಲ್ಲರಿಗೂ ಸಹಾಯ ಮಾಡುವಿರಿ ನನಗೂ ನಿಮ್ಮ ಸಹಾಯ ದೊರೆತರೆ ಒಳ್ಳೆಯದಿತ್ತು ಎಂದು ಕೇಳಿಕೊಳ್ಳಲು, ನನ್ನ ಸಹಾಯವೇಕೆ? ನಿಮ್ಮ ಅರಮನೆಯಲ್ಲಿಯೇ ಭೂಗತ ನಿಧಿ ಇದೆ ನೋಡಿ ತೆಗೆದುಕೊಳ್ಳಿ ಎಂದು ಹೇಳಿದರಂತೆ. ಬೊಮ್ಮಗೊಂಡ ಹೇಳಿದಂತೆ ಅರಮನೆಯಲ್ಲಿ ನಿಧಿ ದೊರೆತು ಅರಸ ಹರ್ಷಭರಿತನಾದನಂತೆ''[೧೪] ಹೀಗೆ ಅನೇಕ ಐತಿಹ್ಯಗಳು ಬೀದರ ತುಂಬ ಹರಡಿಕೊಂಡಿರುವುದು ನಾವು ನೋಡಬಹುದಾಗಿದೆ.

ಬೊಮ್ಮಗೊಂಡೇಶ್ವರ ಕುರಿತ ಈ ಎಲ್ಲ ಐತಿಹ್ಯಗಳು ಅದು ಕುಟಿಲ ಸನ್ಯಾಸಿಯನ್ನು ಬಲಿ ಕೊಟ್ಟದ್ದಾಗಿರಲಿ, ಸುಲ್ತಾನನಿಗೂ ಅವನ ಸೈನ್ಯಕ್ಕೂ ನೀರು ಕುಡಿಸಿದ್ದಾಗಿರಲಿ, ಕೋಟೆ ನಿರ್ಮಾಣಕ್ಕೆ ಹಣ ಕೊಟ್ಟದ್ದಾಗಿರಲಿ, ಜೊತೆಗೆ ಕಾಕತಿ ಅರಸನಿಗೆ ನಿಧಿ ಕುರಿತು ಹೇಳಿದ್ದಾಗಿರಲಿ ಪ್ರತಿಯೊಂದು ಐತಿಹ್ಯಗಳು ಬೊಮ್ಮಗೊಂಡನ ಕುರಿತ ಔನತ್ಯದ ಗಾಥೆಯನ್ನೇ ಜನಪದರು ಹೇಳಲು ಹವಣಿಸುತ್ತಾರೆ. ''ಐತಿಹ್ಯದ ಪ್ರಮುಖ ಗುಣಲಕ್ಷಣವೇ ಹೀಗೆ ಚಾರಿತ್ರಿಕ ಪುರುಷರು ಐತಿಹ್ಯದ ವಸ್ತುವಾಗಿ ಪರಿಣಮಿಸಿ ಅವರ ಶೌರ್ಯ ಗುಣ, ಗಂಭೀರ, ವೈಶಿಷ್ಟ್ಯಗಳನ್ನು ಪ್ರತ್ಯಕ್ಷವಾಗುವಂತೆ ಮಾಡುತ್ತವೆ'[೧೫] ಒಂದು ಕಾಲದಲ್ಲಿ ನಡೆದ ಐತಿಹಾಸಿಕ ಸತ್ಯವನ್ನು ತಲೆಯಮೇಲೆ ಹೊತ್ತುಕೊಂಡು ಜನರ ಬಾಯಿಯಿಂದ ಬಾಯಿಗೆ ಸಂಚರಿಸತೊಡಗುತ್ತವೆ. ಇವು ಇತಿಹಾಸಕಾರರಿಗೆ ಪೂರಕ ಮಾಹಿತಿ ಒದಗಿಸಿ ಕೊಡುವುದರಲ್ಲಿ ಎರಡು ಮಾತಿಲ್ಲ. ಆದರೆ ವೈದ್ಯ ಔಷಧಕ್ಕೆ ಬಳಸುವ ವಿಷದಂತೆ ಐತಿಹ್ಯಗಳನ್ನು ಇತಿಹಾಸಕ್ಕೆ ಬಳಸಿಕೊಳ್ಳಬೇಕಾಗುತ್ತದೆ.

ಬೊಮ್ಮಗೊಂಡೇಶ್ವರನಿಗೆ ಸಂಬಂಧಪಟ್ಟ ಈ ಐತಿಹ್ಯಗಳು ಬೀದರ ಜಿಲ್ಲೆಯಲ್ಲಿ ಜನಜನಿತವಾಗಿವೆ. ಇಲ್ಲಿನ ಮೂಲ ನಿವಾಸಿಗಳಾದ ಹಳೆಯ ತಲೆಮಾರಿನವರಿಗೆ ಯಾರಿಗೆ ಬೇಕಾದರೂ ಕೇಳಿದರೆ ಈ ಐತಿಹ್ಯ ಪರಿಚಯ ಇದ್ದೇ ಇರುತ್ತದೆ. ಜನಪದರ ಮೌಖಿಕ ಪರಂಪರೆಯಿಂದ ಮುಂದಿನ **ಪೀಳಿಗೆಗೆ ವರ್ಗಾವಣೆಯಾಗುತ್ತದೆ.**

ಈ ಮೌಖಿಕ ಪರಂಪರೆಯ ಎಲ್ಲ ಅಂಗಗಳನ್ನು ಬಳಸಿಕೊಂಡು ಒಂದು ಹೊಸ ಸ್ಥಳೀಯ ಚರಿತ್ರೆಯನ್ನೇ ನಿರ್ಮಾಣ ಮಾಡಬಹುದು. ಅಷ್ಟು ಮಾಹಿತಿಗಳು ಇಲ್ಲಿನ ಸ್ಥಳೀಯ ಜನಪದರಿಂದ ನಮಗೆ ಸಿಗುತ್ತವೆ. ಆದರೆ ಆಧುನೀಕರಣದ ನೆರಳಿನಲ್ಲಿ ಬದುಕುತ್ತಿರುವ ನಮಗೆ ಇದಾವುದರ ಪರಿವೆಯೇ ಇಲ್ಲ. ಸ್ಥಳೀಯ ಚರಿತ್ರೆ ನಿರ್ಮಿಸುವಲ್ಲಿ, ಮೌಖಿಕ ಪರಂಪರೆಯ ಪ್ರಮುಖ ಪಾತ್ರ ವಹಿಸುತ್ತದೆ. ಏಕೆಂದರೆ ಸ್ಥಳೀಯ ಚರಿತ್ರೆಯ ಅಧ್ಯಯನಕ್ಕೆ ಲಿಖಿತ ದಾಖಲೆಗಳಿಗಿಂತಲೂ ಮೌಖಿಕ ದಾಖಲೆಗಳು ಮಹತ್ವವಾದುವುಗಳಾಗಿರುತ್ತವೆ. ಅಷ್ಟೇ ಅಲ್ಲದೇ ಸಂಸ್ಕೃತಿಯ ಅಧ್ಯಯನದ ದೃಷ್ಟಿಯಿಂದ ಒಂದು ಪ್ರಮುಖ ಆಕರ ರೂಪದ ದಾಖಲೆಗಳನ್ನು ನಿರ್ಲಕ್ಷಿಸಿಕೊಂಡೇ ಬರುತ್ತಿರುವುದು ಕಂಡು ಬರುತ್ತದೆ. ಏಕೆಂದರೆ ''ಜನರು ಏನನ್ನು ನಂಬಿದ್ದಾರೋ ಅದನ್ನು ವಿದ್ವಾಂಸರು ನಂಬುತ್ತಿಲ್ಲ ಹಾಗಾಗಿಯೇ

---

**ಅಡಿ ಟಿಪ್ಪಣಿ :**

೧೪. ಶಾಂತಲಿಂಗ ಸ್ವಾಮಿ ಲಾಡಗೇರಿ (೬೨), ಬೀದರ.

೧೫. 'ಜಾನಪದ ಸೌರಭ' ಬಿ.ಎಸ್.ಸ್ವಾಮಿ, ಪು.೩೯೯.

ವಿದ್ವಾಂಸರು ಏನನ್ನು ಹೇಳುತ್ತಾರೋ ಅದನ್ನು ಜನರು ನಂಬುತ್ತಿಲ್ಲ. ಇಂತಹ ಬಿಕ್ಕಟ್ಟಿನಲ್ಲಿ ಸ್ಥಳೀಯ ಚರಿತ್ರೆಯ ಸಂಶೋಧಕರು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಸಮಸ್ಯೆಗಳಿವೆ ಎಂದು ಈ ಮೌಖಿಕ ಪರಂಪರೆಯ ಸಾಮಗ್ರಿಯನ್ನು ನಿರ್ಲಕ್ಷಿಸಿಕೊಂಡು ಬಂದರೆ ಅನೇಕ ರೀತಿಯ ತೊಂದರೆಯ ಜೊತೆಗೆ ನಷ್ಟವನ್ನು ಎದುರಿಸಬೇಕಾಗುತ್ತದೆ.'[೧೬] ಈ ಮಾತು ಐತಿಹ್ಯಗಳಿಗೆ ಹೆಚ್ಚು ಅನ್ವಯವಾಗುತ್ತವೆ. ಈ ''ಐತಿಹ್ಯಗಳಲ್ಲಿ ಚಾರಿತ್ರಿಕ, ಐತಿಹಾಸಿಕ, ಪೌರಾಣಿಕ ಅಂಶಗಳನ್ನು ಗುರುತಿಸಿಕೊಳ್ಳುವುದು ನಮ್ಮ ಜವಾಬ್ದಾರಿಯಾಗಿರುತ್ತದೆ ಅಷ್ಟೇ, ಇತಿಹಾಸವನ್ನು ರಚಿಸುವಲ್ಲಿ ವ್ಯಕ್ತಿಯ ಚರಿತ್ರೆಯನ್ನು ಅರಿಯುವಲ್ಲಿ ಸ್ಥಳದ ಮಹತ್ವವನ್ನು ಹೇಳುವಲ್ಲಿ ಐತಿಹ್ಯಗಳು ನಮಗೆ ವಿಷಯವನ್ನೊದಗಿಸುತ್ತವೆ.'[೧೭]

ಜಾನಪದವನ್ನು ಹಿನ್ನೆಲೆಯಾಗಿಟ್ಟುಕೊಂಡು ಸ್ಥಳೀಯ ಚರಿತ್ರೆಯನ್ನು ಕಟ್ಟಿನೋಡಬೇಕು. ಆದರೆ ಸತ್ಯಾಸತ್ಯತೆಯನ್ನು ಇತಿಹಾಸ ಸಂಶೋಧಕರಿಗೆ ಬಿಡುವುದೊಳಿತು. ಜಾನಪದವು ಇತಿಹಾಸ ನಿರ್ಮಿಸುವಲ್ಲಿ ಹಿಂದೆ ಬೀಳುವುದಿಲ್ಲ ಎಂಬ ಮಾತು ಈ ಸಂದರ್ಭದಲ್ಲಿ ಅರಿವಿಗೆ ಬರುತ್ತದೆ. ಇತಿಹಾಸ ರಚನೆಗೊಳ್ಳುವ ಸಂದರ್ಭದಲ್ಲಿ ಮೌಖಿಕ ಆಕರಗಳು ಯಾವಾಗಲೂ ನಿರ್ಲಕ್ಷ ಒಳಗಾಗಿವೆ. ಇತಿಹಾಸದ ಮಾನದಂಡಗಳನ್ನು ಸ್ವಲ್ಪ ಬದಿಗಿರಿಸಿ ಮೌಖಿಕ ಆಕರಗಳನ್ನೇ ಪೂರಕವಾಗಿ ತೆಗೆದುಕೊಳ್ಳುವುದಾದರೆ ಬಹುಶಃ ಇತಿಹಾಸ ಅಷ್ಟೇ ಅಲ್ಲ ಇತಿಹಾಸದ ಒಟ್ಟು ಸಾಂಸ್ಕೃತಿಕ ಮೊತ್ತವೇ ಬದಲಾಗುತ್ತದೆ. ಜನಪದದ ಯಾವುದೇ ರೂಪ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಹಿಂದೆ ಬಿದ್ದಿಲ್ಲ. ಐತಿಹ್ಯ ಒಂದನ್ನೇ ದೃಷ್ಟಿಯಲ್ಲಿಟ್ಟುಕೊಂಡು ಹೇಳಬೇಕೆಂದರೆ ಇದರ ಪಾತ್ರ ಹಿರಿದು. ಸ್ಥಳೀಯ ಚರಿತ್ರೆಗೆ ಸ್ಥಳೀಯವಾದ ಆಕರಗಳು ಆಧಾರ ಸ್ಥಂಭವಾಗಿರುತ್ತವೆ.

- - -

ಅಡಿ ಟಿಪ್ಪಣಿ :

೧೬. 'ಸ್ಥಳೀಯ ಚರಿತ್ರೆ' ಪ್ರೊ॥ ಲಕ್ಷ್ಮಣ ತೆಗಾವಿ, ಪು. ೭೦.

೧೭. 'ಕನ್ನಡ ಜಾನಪದ ಪ್ರಜ್ಞೆ' ಡಾ॥ ವೀರಣ್ಣಾದಂಡೆ, ಪು.೧೫೮.

## ಆಧಾರ ಗ್ರಂಥಗಳು

(೧) 'ಕನ್ನಡ ಜಾನಪದ ಪ್ರಜ್ಞೆ'
ಡಾ|| ವೀರಣ್ಣಾ ದಂಡೆ
ಕವಿಮಾರ್ಗ ಪ್ರಕಾಶನ ಗುಲ್ಬರ್ಗಾ - ೧೯೯೩.

(೨) 'ಜೀಶಂಪರವರ ಜಾನಪದ ಬರಹಗಳು'
ಸಂ. ಕಾಳೇಗೌಡ ನಾಗವಾರ, ಅಂಬಳಿಕೆ ಹಿರಿಯಣ್ಣ
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ
ಆಗಸ್ಟ ೧೦, ೨೦೦೦.

(೩) 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂಪುಟ ೪, ಸಂಚಿಕೆ ೪, ನವೆಂಬರ ೧೯೯೭.
ಸಂ. ಎಚ್.ಸಿ. ಶಿವಕುಮಾರ
ಲೇಖನ : 'ನಿರ್ಲಕ್ಷಿತ ಇತಿಹಾಸದಲ್ಲಿ ಬೊಮ್ಮಗೊಂಡೇಶ್ವರರ ಚರಿತ್ರೆ'
ಲೇಖಕರು : ಡಾ|| ಕೆ.ಎಂ. ಮೈತ್ರಿ
ಕನಕ ಪ್ರತಿಷ್ಠಾನ, ಶ್ರೀ ಕಾಗಿನೆಲೆ ಮಹಾ ಸಂಸ್ಥಾನ, ಕನಕ ಗುರುಪೀಠ ,
ಕಾಗಿನೆಲೆ - ೫೮೧ ೧೫೩.

(೪) 'ಬೀದರ ಜಿಲ್ಲಾ ದರ್ಶನ'
ಸಂ. ಡಾ|| ಜಗನ್ನಾಥ ಹೆಬ್ಬಾಳೆ
ಜಿಲ್ಲಾ ನ್ನಡ ಸಾಹಿತ್ಯ ಪರಿಷತ್, ಬೀದರ.
೧೯೯೨

(೫) 'ಸುಲ್ತಾನ ಸುರುಳಿ'
ಡಾ|| ಕೆ.ಎಂ. ಮೈತ್ರಿ
ಮೈತ್ರಿ ಪ್ರಕಾಶನ.
ಬೀದರ.
೧೯೯೪

(೬) 'ಜಾನಪದ ಸೌರಭ'
ಬಿ.ಎಸ್. ಸ್ವಾಮಿ
ಗೋರಕ್ಷನಾಥ ಪ್ರಕಾಶನ, ಬೆಂಗಳೂರು - ೧೯೯೩.

## ೪. ಬೊಮ್ಮಗೊಂಡೇಶ್ವರನ ಪವಾಡಗಳು

ಈ ಭೂಮಿ ಮೇಲೆ ನಮ್ಮ ಸುತ್ತಮುತ್ತಲೂ ಅನೇಕ ಪವಾಡ ಪುರುಷರು ಆಗಿ ಹೋಗಿದ್ದಾರೆ. ''ಪವಾಡಗಳು ನಮ್ಮ ಪರಂಪರೆಯಿಂದ ಬಂದಿವೆ. ಇವು ನಂಬುಗೆಯ ಪ್ರಕಾರ. ಜಗತ್ತಿನ ಮಹತ್ವದ ಹಾಗೂ ಪ್ರಮುಖ ಧರ್ಮಗಳ ಕೃತಿಗಳಲ್ಲೂ ಇವು ವರ್ಣಿತವಾಗುತ್ತಾ ಬಂದಿವೆ. ಇವು ಧಾರ್ಮಿಕ ಮಹಾಪುರುಷರ, ಸಾಧು ಸತ್ಪುರುಷರ ಜೀವನ ಚರಿತ್ರೆಯಲ್ಲಿ ಬೆರೆತುಕೊಂಡಿವೆ. ಶಿವಶರಣರೂ ಇದಕ್ಕೆ ಹೊರತಾಗಿಲ್ಲ. ಶರಣರ ಬಗ್ಗೆ ಶ್ರೀ ಸಾಮಾನ್ಯರಲ್ಲಿ ಶ್ರದ್ಧೆ, ಭಕ್ತಿ ಮೂಡಿಸಲು ಪವಾಡಗಳು ಮೆರೆದವು. ಒಬ್ಬ ವ್ಯಕ್ತಿಯನ್ನು ದೊಡ್ಡವನಾಗಿ ಮಾಡಲು ಪವಾಡಗಳು ಹುಟ್ಟಿಕೊಂಡವು. ವೀರಶೈವ ಸಾಹಿತ್ಯದಲ್ಲೂ ಪವಾಡಗಳಿವೆ. ಇದರಲ್ಲಿ ಒಂದು ಕಾಲದ ಜನತೆಯ ಜೀವನ ವಿಧಾನವೇ ಅಡಕವಾಗಿರುತ್ತದೆ ಎಂದರೆ ಅತಿಶಯೋಕ್ತಿಯಾಗಲಾರದು.''[೧]

ಬೀದರ ಜಿಲ್ಲೆ ಆಧ್ಯಾತ್ಮಿಕದ ತವರೂರು, ಇಲ್ಲಿ ಅನೇಕ ಧರ್ಮವಂತರು, ಜ್ಞಾನಿಗಳು, ಸಾಧಕರು ಆಗಿ ಹೋಗಿದ್ದಾರೆ. ಅವರು ಅನೇಕ ಪವಾಡಗಳನ್ನು ಮಾಡಿ ತೋರಿಸಿದ್ದಾರೆ. ಬೊಮ್ಮಗೊಂಡೇಶ್ವರನು ಕೂಡ ಬೀದರ ಜಿಲ್ಲೆಯಲ್ಲಿ ಅನೇಕ ಪವಾಡಗಳನ್ನು ಮಾಡಿ ಪವಾಡ ಪುರುಷನೆಂದೇ ಪ್ರಖ್ಯಾತಿ ಪಡೆದಿದ್ದಾನೆ. ಬೀದರಿನ ಹಳ್ಳಿಹಳ್ಳಿಗಳಲ್ಲಿ ಇವರ ಪವಾಡಗಳು ಪ್ರಚಲಿತದಲ್ಲಿವೆ. ಬೊಮ್ಮಗೊಂಡೇಶ್ವರನು ಆಡಿದ ಮಾತುಗಳು, ಹಿತನುಡಿಗಳು, ಮಾಡಿದ ಕಾರ್ಯಗಳು ಮಹತ್ತಾಗಿ ಕಾಣುವ ಸಂದರ್ಭದಲ್ಲಿ ಸಾಮಾನ್ಯ ಜನರು ಅವುಗಳನ್ನು ಪವಾಡಗಳೆಂದೇ ಭಾವಿಸುತ್ತಾರೆ. ಏಕೆಂದರೆ ಅವು ಸಾಮಾನ್ಯನಿಂದ ಸಾಧ್ಯವಾಗದಂಥ ಕಾರ್ಯಗಳು. ಲಕ್ಷಕ್ಕೆ ಒಬ್ಬನಂತೆ ಇಂಥ ಅಸಾಧರಣ ವ್ಯಕ್ತಿತ್ವ ಹೊಂದಿದ್ದಾಗ, ಅವರು ಮುಟ್ಟಿದ ವೃಕ್ಷಗಳೆಲ್ಲ ಕಲ್ಪವೃಕ್ಷಗಳು ಎಂಬಂತೆ ತೋರುತ್ತವೆ. ವಿವಿಧ ರೀತಿಯ ಪವಾಡಗಳು ವಿಶ್ವದೆಲ್ಲೆಡೆ ಕಂಡು ಬರುತ್ತವೆ. ಪವಾಡಗಳ ನಂಬಿಕೆ ಹಿಂದೂಗಳಲ್ಲಿದ್ದಂತೆ, ಮುಸ್ಲಿಂ, ಕ್ರೈಸ್ತ, ಜೈನ, ಬೌದ್ಧರಲ್ಲಿಯೂ ಈ ಕುರಿತು ಹಲವಾರು ಅಭಿಪ್ರಾಯಗಳಿವೆ. ಈ ಪವಾಡಗಳು ವ್ಯಕ್ತಿಯೊಬ್ಬನನ್ನು ದೈವೀಕರಿಸುವಲ್ಲಿ ಸಹಾಯಕವಾಗುತ್ತವೆ. ವ್ಯಕ್ತಿಯ ಸಾಹಸ-ಶೌರ್ಯಗಳು ಮುಂದೆ ಪವಾಡಗಳು ಎಂಬಂತೆ ಪ್ರಚಾರಗೊಳ್ಳುತ್ತವೆ. ಬೀದರ ಜಿಲ್ಲೆಯಲ್ಲಿ ಬೊಮ್ಮಗೊಂಡೇಶ್ವರನ ಪವಾಡಗಳು ಪ್ರಚಲಿತದಲ್ಲಿವೆ. ಮಳೆ-ಬೆಳೆ ಕುರಿತಂತೆ ವಿವಿಧ ಪವಾಡಗಳು ಇದ್ದದ್ದು ನಮಗೆ ಕಾಣಸಿಗುತ್ತವೆ. ಬೊಮ್ಮಗೊಂಡೇಶ್ವರನು ಭವಿಷ್ಯದ ಹೇಳಿಕೆಗಳನ್ನು ಕರಾರುವಕ್ಕಾಗಿ ಹೇಳುತ್ತಿದ್ದನು. ಆ ಪವಾಡಗಳೆಂದರೆ -

(೧) ಮಳೆ ಕುರಿತ ಪವಾಡಗಳು

(೨) ಹಗಲಿನಲ್ಲಿ ನಕ್ಷತ್ರ ನೋಡುವ ಪವಾಡ

(೩) ತೋಳದಿಂದ ಕುರಿಗಳನ್ನು ರಕ್ಷಣೆ ಮಾಡಿದ ಪವಾಡ

(೪) ಹಾವು ಕಡಿದ ಮಗುವನ್ನು ರಕ್ಷಿಸಿದ್ದು

(೫) ಹಣೆಯಲ್ಲಿ ಸೂರ್ಯನನ್ನು ತೋರಿಸಿದ ಪವಾಡ

---

ಅಡಿ ಟಿಪ್ಪಣಿ :

೧. 'ಜಾನಪದ ಸೌರಭ' ಡಾ. ಬಿ.ಎಸ್.ಸ್ವಾಮಿ, ಪು. ೩೫೦.

(೧) **ಮಳೆ ಕುರಿತ ಪವಾಡಗಳು :**

''ಒಮ್ಮೆ ಬೊಮ್ಮಯ್ಯ ಬಾಲಕನಿದ್ದಾಗ ಮೈಲಾರಲಿಂಗನ ದರ್ಶನಕ್ಕೆ ಸ್ನೇಹಿತರ ಜೊತೆ ಹೋದನು. ಬಿಸಿಲಿನ ತಾಪದಿಂದ ಹುಡುಗರೆಲ್ಲರೂ ಬಹಳ ಬಳಲಿದರು. ಬೊಮ್ಮಗೊಂಡನು ತನ್ನ ಪವಾಡ ಶಕ್ತಿಯಿಂದ ಮಳೆ ತರಿಸಿ ವಾತಾವರಣ ತಂಪುಗೊಳಿಸಿದನು. ಈತನ ಆಧ್ಯಾತ್ಮಿಕ ಬಲದಿಂದ ಅಲ್ಲಿಯ ಜನರು ಚಕಿತರಾದರು. ಜನರಲ್ಲಿ ಈತನ ಬಗ್ಗೆ ಭಕ್ತಿ ಬೆಳೆಯತೊಡಗಿತು.

೧೩೩೬ ರಲ್ಲಿ ಬಂದ ದುರ್ಗಾದೇವಿ ಬರಗಾಲ ೧೨ ವರ್ಷಗಳ ಕಾಲ ಈ ಜಿಲ್ಲೆಯನ್ನು ಪೀಡಿಸಿದೆ. ೧೪೨೨-೨೩ ರಲ್ಲಿ ಕೂಡ ಮಳೆ ಬಾರದೇ ದುಸ್ಥಿತಿ ಉಂಟಾಗಿತ್ತು. ಬಿಸಿಲಿನ ತಾಪ ಹೆಚ್ಚಾಯ್ತು, ಗಿಡ ಮರಗಳು ಎಲೆ ಉದುರಿಕೊಂಡು ಒಣಗಿದವು, ದನ ಕುರಿಗಳನ್ನು ಮೇಯಿಸಲು ಮೇವು ಇಲ್ಲದಾಯ್ತು, ಕಾಡಿನ ಗೊಂಡ ಕುರುಬರೆಲ್ಲ ಹೌಹಾರಿ ಏನು ಮಾಡಬೇಕೆಂದು ದಿಕ್ಕು ತೋಚದಾಗಿ ಬೊಮ್ಮಗೊಂಡನಿಗೆ ಕೇಳೋಣವೆಂದು ಬಂದರು. ಆಗ ಬೊಮ್ಮಗೊಂಡ 'ನೂರೊಂದು ಡೊಳ್ಳು ನೆರೆಸಿ, ಖಂಡೋಬ (ಮಲ್ಲಣ್ಣ) ದೇವರ ಮುಂದೆ ಒಂದು ಕಾಲಿನ ಮೇಲೆ ನಿಂತು ಏಕಾಗ್ರ ಚಿತ್ತದಿಂದ ಮಳೆ ಬರುವವರೆಗೆ ಭಾರಿಸುವುದು' ಎಂದ. ಎಲ್ಲ ಗೊಂಡರು ಅವರ ಹೇಳಿಕೆ ಪ್ರಕಾರ ಡೊಳ್ಳು ಸಮೇತ ಮೈಲಾರ ಘಟಕ್ಕೆ (ಗೊಂಡಾರಣ್ಯ) ಬಂದರು. ಖಂಡೋಬಾ ದೇವರ ಮುಂದೆ ನಿಂತು ಡೊಳ್ಳು ಭಾರಿಸಲಾರಂಭಿಸಿದರು. ಬ್ರಹ್ಮಾಂಡವೇ ನಡುಗಿತು. ಹಿರಿಯ ವಗ್ಗಯ್ಯ ಹೀಗೆಂದ -

ಹರಿಹರರಿಂದ ಉದ್ಭವಿಸಿ ಬಂದ
ಕುರಿ ಕಾಯವರ ಉದರದಿ ಜನಿಸಿ
ಪರಮ ಪವಿತ್ರ ಆತ್ಮ ಬ್ರಹ್ಮದೇವ
ಸುರಲೋಕದಿಂದಿಳಿದು ಬಂದಿರುವನು

ಆ ಬೊಮ್ಮಗೊಂಡ ನುಡಿದ ವಾಕ್ಯಗಳೇ ವೇದವಾಕ್ಯ. ಅವನ ಹೇಳಿಕೆ ಪ್ರಕಾರ ನೀವೆಲ್ಲಾ ನಡೆದುಕೊಳ್ಳಿ ಇಂದು ಅವನ ನಾಲಿಗೆಯ ಮೇಲೆ ಭವಿಷ್ಯದ ನುಡಿಗಳು ಬರೆಯುತ್ತೇನೆ. ಮಾಯಾ ಜಾಲದಲ್ಲಿ ಮರೆತ ಅವನಿಗೆ ಪೂರ್ವ ಜನ್ಮದ ಅರಿವು ಕೊಡುತ್ತೇನೆ. ಕರೆದು ತನ್ನಿ ನನ್ನೆದುರಿಗೆ ಎನ್ನಲಾಗಿ ಬೊಮ್ಮಗೊಂಡನಿಗೆ ಕರೆದು ಹಿರಿಯ ವಗ್ಗಯ್ಯನ ಮುಂದೆ ನಿಲ್ಲಿಸಲು ವರದ ಹಸ್ತ ಅವನ ತಲೆಯ ಮೇಲಿಟ್ಟು ಗೊಂಡರನ್ನು ರಕ್ಷಿಸು ಎಂದ ಕೂಡಲೆ ಬೊಮ್ಮಗೊಂಡನ ಮೈಮೇಲೆ ಖಂಡೋಬ (ಮಲ್ಲಣ್ಣ) ದೇವರ ಪ್ರವೇಶವಾಗಿ -

'ಎಲೋ ಗೊಂಡ ಜನಾಂಗದ ಪುಂಡ ಮಕ್ಕಳೇ
ಹಿಂಡು ಕುರಿಗಳ ಕಂಡು ಕನಿಕರಿಸಿ
ಖಂಡ ಶಶಿಧರ ಅಖಂಡ ಮಂಡಲದಿ
ಮೂರು ತಾಸು ಮೂರು ಘಳಿಗೆ
ಮೂವತ್ತಾರು ಪಳದೊಳಗೆ ಮಳೆ ಬರುವುದು'

ಎಂದು ಹೇಳಿದ ಹೇಳಿಕೆ ಸುಳ್ಳಾಗಲಿಲ್ಲ. ಡೊಳ್ಳಿನ ನಾದ ಗೊಂಡರ ಏಳ ಏಳ ಕೋಟ ಉಘೇ... ಉದ್ಘೋಷ ಆಕಾಶಕ್ಕೆ ತಲುಪಿ ಮಳೆರಾಯ ಗೊಂಡರ ಭಕ್ತಿಗೆ ಮೆಚ್ಚಿ ಮಳೆ ಸುರಿಸಿದ. ಎಲ್ಲರೂ ಸಂತೋಷಗೊಂಡರು. ತಮ್ಮ ತಮ್ಮ ಹಟ್ಟಿಗೆ ಮರಳಿದರು.'[೨] ಹೀಗೆ ಬೊಮ್ಮಗೊಂಡ ಮಳೆ ಬರಲು ಪವಾಡವನ್ನು ಮಾಡಿದ್ದ. ಅಷ್ಟೇ ಅಲ್ಲ ಬೊಮ್ಮಗೊಂಡನ ಹೇಳಿಕೆಗಳನ್ನು ಪರೀಕ್ಷೆ ಮಾಡಲು ಸ್ವತಃ ಪರಮಾತ್ಮನೇ ಭೂಮಿಗೆ ಬಂದ ಎನ್ನುವ ಮತ್ತೊಂದು ಪವಾಡವಿದೆ ಅದೆಂದರೆ -

''ಒಂದು ದಿನ ಬೊಮ್ಮಗೊಂಡ ಕುರಿ ಕಾಯುತ್ತಿರುವಾಗ ಎಲ್ಲಿಲ್ಲದ ಗುಡುಗು ಮಿಂಚು ಪ್ರಾರಂಭವಾಯಿತು. ಇನ್ನೇನು ಸ್ವಲ್ಪ ಹೊತ್ತಿಗೆ ಮಳೆ ಬೀಳಬಹುದು ಎನ್ನುವಂತಿತ್ತು. ಗುಡುಗು ಮಿಂಚಿನಿಂದ ಹಳ್ಳ ಕೊಳ್ಳ ಹರಿಯುವಷ್ಟು ಮಳೆ ಬೀಳಬಹುದು ಎನ್ನುವಂತಹ ಪರಿಸ್ಥಿತಿ ಇತ್ತು. ಆದರೆ ಬೊಮ್ಮಗೊಂಡ ಮಾತ್ರ ನಿಶ್ಚಿಂತನಾಗಿ ಕುರಿ ಮೇಯಿಸತೊಡಗಿದ ಆಶ್ಚರ್ಯಚಕಿತನಾದ ಪರಮಾತ್ಮ ಬೊಮ್ಮಗೊಂಡನ ಹತ್ತಿರ ಬಂದು 'ಧಾರಾಕಾರವಾಗಿ ಮಳೆ ಬೀಳುವ ಹಾಗಿದೆ, ಕುರಿ ಹೊಡೆದುಕೊಂಡು ಮನೆಗೆ ಹೋಗದೇ ನಿಶ್ಚಿಂತನಾಗಿದ್ದಿಯಲ್ಲ, ಕುರಿಗಳೆಲ್ಲ ಹಳ್ಳದಲ್ಲಿ ಸಿಕ್ಕಿಕೊಳ್ಳುವ ಭಯ ನಿನಗಿಲ್ಲವೇನು ?' ಎಂದು ಪ್ರಶ್ನಿಸಿದ. ಅದಕ್ಕೆ ಬೊಮ್ಮಗೊಂಡ 'ಇಲ್ಲ, ಇನ್ನು ಮೂರು ದಿನ ಮಳೆ ಬರೋದಿಲ್ಲ' ಎಂದು ಹೇಳಿದ. ಅಂದು ಎಷ್ಟೇ ಗುಡುಗು ಗುಡುಗಿದರೂ, ಮಿಂಚು ಮಿಂಚಿದರೂ ಮಳೆ ಮಾತ್ರ ಬೀಳಲೇ ಇಲ್ಲ. ಮರುದಿನ ಪರಮಾತ್ಮ ಮೇಘರಾಜನಲ್ಲಿಗೆ ಹೋಗಿ ನೀನು ಹೇಗಾದರೂ ಮಾಡಿ ಇವತ್ತು ಮಳೆ ಬೀಳುವಂತೆ ಮಾಡು ಎಂದು ಆಜ್ಞಾಪಿಸಿಕೊಂಡನು. ಅದಕ್ಕೆ ಮೇಘರಾಜನು 'ಇಲ್ಲ, ಇವತ್ತು ಮಳೆ ಬೀಳಿಸಲು ಸಾಧ್ಯವಿಲ್ಲ ಮಳೆ ಬೀಳುವುದೇನಾದರೂ ಇದ್ದರೆ ಅದು ನಾಳೆ' ಎಂದು ಹೇಳಿದ ಪರಮಾತ್ಮನಿಗೆ ಆಶ್ಚರ್ಯವಾಯಿತು. ಇದೇನು ಬೊಮ್ಮಗೊಂಡನಿಗೆ ಮಳೆ ಕುರಿತು ನಿಜವಾಗಿಯೂ ಜ್ಞಾನ ಇದೆ ಎಂದು ಅಂದುಕೊಂಡನು.

ಮತ್ತೆ ಮರುದಿನ ಬೊಮ್ಮಗೊಂಡನಲ್ಲಿಗೆ ಬಂದನು. ಆಗ ಕುರಿಗಳನ್ನು ಹೊಡೆದುಕೊಂಡು ಹೋಗುತ್ತಿದ್ದ ಬೊಮ್ಮಗೊಂಡನನ್ನು ತಡೆದು 'ಎಲ್ಲಿಗೆ ಹೋಗುತ್ತಿರುವೆ' ಎನ್ನಲು 'ಈಗ ಧಾರಾಕಾರವಾಗಿ ಮಳೆ ಬೀಳುವ ಹಾಗಿದೆ ಅದಕ್ಕಾಗಿ ಕುರಿಗಳನ್ನೆಲ್ಲ ಹೊಡೆದುಕೊಂಡು ಹೋಗುತ್ತಿರುವೆ' ಎನ್ನುತ್ತಾನೆ ಬೊಮ್ಮಗೊಂಡ. ಅದಕ್ಕೆ ಪರಮಾತ್ಮ 'ಇವತ್ತು ಗುಡುಗಿಲ್ಲ, ಮಿಂಚಿಲ್ಲ, ಮಳೆ ಬರುವುದಿಲ್ಲ' ಎನ್ನಲು ಬೊಮ್ಮಗೊಂಡ 'ಇಲ್ಲ, ಇವತ್ತು ಧಾರಾಕಾರವಾಗಿ ಮಳೆ ಬೀಳುವುದು' ಎನ್ನುತ್ತಾ ಅಲ್ಲಿಂದ ತನ್ನ ಕುರಿಗಳನ್ನು ಹೊಡೆದುಕೊಂಡು ಹೋಗುತ್ತಾನೆ. ಸ್ವಲ್ಪ ಸಮಯದಲ್ಲೇ ಧಾರಾಕಾರವಾಗಿ ಮಳೆ ಬೀಳಲು ಪ್ರಾರಂಭಿಸುತ್ತದೆ. ಇದನ್ನು ನೋಡಿದ ಪರಮಾತ್ಮ ನಿಜವಾಗಿಯೂ ಇವನೊಬ್ಬ ಮಹಾತ್ಮ ಪುರುಷನೆಂದು ಹೊಗಳಿ ಸಂತೋಷ ಪಡುತ್ತಾನೆ''.[೩]

ಈ ರೀತಿ ಬೊಮ್ಮಗೊಂಡನನ್ನು ಪರೀಕ್ಷೆ ಮಾಡಲೆಂದೇ ಪರಮಾತ್ಮ ಧರೆಗೆ ಬಂದನು ಮತ್ತು ಆ ಪರೀಕ್ಷೆಯಲ್ಲಿ ಬೊಮ್ಮಗೊಂಡ ಯಶಸ್ವಿಯಾದನು ಎಂಬ ಈ ಪವಾಡ ಕಥೆಯ ಸ್ವರೂಪವನ್ನು

---

**ಅಡಿ ಟಿಪ್ಪಣಿ :**

೨. 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂ. ಎಚ್.ಸಿ.ಶಿವಕುಮಾರ, ಪು.೧೩.

೩. ಮಾಳಪ್ಪ ಅಡಸಾರೆ ಏಕಲಾರ (೩೫) ರವರ ಹೇಳಿಕೆ

'ಹಾಲುಮತ'ದಲ್ಲಿ ಕಾಣಬಹುದಾಗಿದೆ. ಆದರೆ ಅಲ್ಲಿ ಬೊಮ್ಮಗೊಂಡನ ಕುರಿತಿರದೇ ಬೀರಗೊಂಡ, ಮಾಳಗೊಂಡರ ಕುರಿತಿದೆ. ಇಲ್ಲಿ ಬೀರಗೊಂಡ ಮತ್ತು ಮಾಳಗೊಂಡ ಮಾಡಿದಂಥ ಪವಾಡವನ್ನು ಬೊಮ್ಮಗೊಂಡನಿಗೆ ಅನ್ವಯಿಸಿ ಹೇಳಿದಂತೆ ತೋರುತ್ತದಾದರೂ ಇದು ಸಂಪೂರ್ಣ ಭಿನ್ನವಾಗಿದೆ. ಕೆಲವೊಮ್ಮೆ ಪವಾಡಗಳು ಒಬ್ಬರಿಂದ ಇನ್ನೊಬ್ಬರ ಮೇಲೆ ಆರೋಪಿಸಲ್ಪಡುವುದು ಸಾಧ್ಯವಿದೆ.

ಮುಖ್ಯವಾಗಿ ಇಲ್ಲಿ ಕಂಡುಕೊಳ್ಳಬಹುದಾದ ಅಂಶವೆಂದರೆ, ಗೊಂಡ ಬುಡಕಟ್ಟಿನವರು ಪ್ರಕೃತಿಗೆ ತೀರ ಹತ್ತಿರದವರಾಗಿದ್ದು ಪ್ರಕೃತಿ ನಿಗೂಢಗಳನ್ನು ಅರಿತಿರುವುದು ಆಶ್ಚರ್ಯವಿಲ್ಲ. ಮೋಡ ನೋಡಿ ಮಳೆ ಯಾವಾಗ ಬರುತ್ತೆ ಎಂದು ಹೇಳುವುದು. ಸೂರ್ಯನನ್ನು ನೋಡಿ ಸಮಯ ತಿಳಿದುಕೊಳ್ಳುವುದು, ಇವೆಲ್ಲ ಈಗಲೂ ನಮ್ಮ ಸುತ್ತಲಿನ ರೈತಾಪಿ ಹಾಗೂ ಅರಣ್ಯವಾಸಿಗಳಲ್ಲಿ ನೋಡುತ್ತೇವೆ. ಈ ಜ್ಞಾನ ಅವರಿಗೆ ಪ್ರಕೃತಿದತ್ತವಾಗಿಯೇ ಬಂದಿರುತ್ತದೆ. ಈಗಲೂ ಅಂದರೆ ಆಧುನಿಕ ಯುಗದಲ್ಲೂ ಮಳೆ ಆಗದೇ ಹೋದರೆ ಹೆಣ್ಣು ಗಂಡು ಎರಡು ಕಪ್ಪೆಗಳನ್ನು ತೆಗೆದುಕೊಂಡು ಮದುವೆ ಮಾಡಿಸಿದರೆ ಅಥವಾ ಎರಡು ಕತ್ತೆಗಳಿಗೆ ಮದುವೆ ಮಾಡಿಸಿದರೆ, ಭಜನೆ ಮಾಡಿದರೆ ಮಳೆಯಾಗುವುದು ಎಂಬ ನಂಬಿಕೆ ಇಂದಿಗೂ ಇದೆ. ಅದರಂತೆ ಮಳೆ ಆಗದೆ ಹೋದರೆ ತಮ್ಮ ಮನೆ ದೈವವನ್ನು, ತಮ್ಮ ನಾಯಕನನ್ನು ಮೊರೆ ಹೋಗುವುದು ಸಹಜ. ಅದರಲ್ಲೂ ಗೊಂಡ ಬುಡಕಟ್ಟಿನ ನಾಯಕನನ್ನು ಮೊರೆ ಹೋಗುವುದಾಗಲಿ, ಹಾಗೂ ಆ ಕುರಿತು ಹೇಳಿಕೆಗಳನ್ನು ಕೊಡುವುದಾಗಲಿ ಆಶ್ಚರ್ಯವೇನು ಕಾಣುವುದಿಲ್ಲ.

ಬೊಮ್ಮಗೊಂಡ ತನ್ನ (ಗೊಂಡ) ಬುಡಕಟ್ಟಿನ ನಾಯಕನಾಗಿದ್ದರಿಂದ ಎಲ್ಲ ಧಾರ್ಮಿಕ ಕಾರ್ಯಗಳು ಅವನಿಂದಲೇ ನೆರವೇರಿಸಲ್ಪಡುತ್ತಿದ್ದವು. ಸಮಾಜದಲ್ಲಿ ಅವನು ಮನ್ನಣೆಗೆ ಪಾತ್ರನಾಗಿದ್ದ ಎಂಬುದು ತಿಳಿದು ಬರುತ್ತದೆ. ಜನಪದರು ಭವಿಷ್ಯತ್ತಿನ ಕುರಿತಂತೆ ಈತನನ್ನು ಕೇಳಿ ಸಮಾಧಾನ ಪಟ್ಟುಕೊಳ್ಳುತ್ತಿರಬಹುದು. ಈತನಿಂದ ಬಂದ ಉತ್ತರಗಳು ನಿಜವಾದಾಗ ಆತನ ಮೇಲೆ ಇನ್ನಷ್ಟು ಶ್ರದ್ಧೆ-ಭಕ್ತಿ ಉಂಟಾಗಲು ಕಾರಣವೂ ಆಗಿರಬಹುದು.

ಜನಪದರು ತನ್ನ ನಾಯಕನ ಕುರಿತು ಇದ್ದಂಥ ಅಗಾಧ ಭಕ್ತಿ, ಶ್ರದ್ಧೆ, ಗೌರವಗಳೂ ದೇವರ ಸರಿಸಮಾನಾಗಿ ನಿಲ್ಲಿಸುವಂತೆ ಮಾಡುತ್ತವೆ. ಇದರ ಹಿಂದೆ ಸಮೂಹದ ಒತ್ತಡಗಳು ಕಾರ್ಯನಿರ್ವಹಿಸಿರುತ್ತವೆ. ಬೊಮ್ಮಗೊಂಡೇಶ್ವರ ಸಂದರ್ಭದಲ್ಲಾದದ್ದು ಇದೆ. ಯಾವುದೋ ಒಂದು ಅಥವಾ ಹಲವು ಸತ್ಯಗಳ ಸುತ್ತ ವೈಭವೀಕರಣದ ಬಣ್ಣ ಬಳಿಯುವುದುದರ ಮೂಲಕ ಅಸ್ತಿತ್ವದ ಉಳಿವಿಗಾಗಿ ಜನವರ್ಗಗಳು ಹೊರಾಡುತ್ತಿರುತ್ತವೆ. ಒಂದು ಕಾಲದಲ್ಲಿ ವ್ಯಕ್ತಿಯೊಬ್ಬ ಮಾಡಿದ ಸಮಾಜಕಾರ್ಯ ಅಥವಾ ಘನಕಾರ್ಯವನ್ನು ಜನರು ಮರೆಯದೆ, ಪಂಚಭೂತಕ್ಕೆ ಆರೋಪಿಸಿ ಅಥವಾ ಒಂದು ಹೆಜ್ಜೆ ಮುಂದೆ ಹೋಗಿ ತನ್ನ ದೈವವಾಗಿ ಸ್ವೀಕರಿಸುವುದರಲ್ಲೂ ಹಿಂದೇಟು ಹಾಕುವುದಿಲ್ಲ. ಮಳೆ ಕುರಿತಂತೆ ಬೊಮ್ಮಗೊಂಡೇಶ್ವರರ ಇನ್ನೊಂದು ಪವಾಡವಿದೆ ಅದು ಹೀಗಿದೆ-

''ದಿನ ನಿತ್ಯದಂತೆ ಬೊಮ್ಮಗೊಂಡೇಶ್ವರನು ಕುರಿ ಕಾಯುತ್ತಾ ಮಾಂಜರಾ ನದಿಯ ದಂಡೆಗೆ ಹೋದನು. ಕುರಿಗಳು ತೀರ ನದಿಯ ದಂಡೆಗೆ ಮೇಯುತ್ತಿದ್ದವು. ಆಕಾಶದಲ್ಲಿ ಮೋಡಗಳು ಚಲಿಸಿ

ಕತ್ತಲೆಯಾಗಿ ಗುಡುಗು ಮಿಂಚು ಪ್ರಾರಂಭವಾಯಿತು. ಮೇಘರಾಜನ ಗರ್ಜನೆ ಮೋಡ ಕಡಿದು ಬೀಳುವ ಹಾಗಿತ್ತು. ಸಾಯಂಕಾಲದ ಸಮಯ ದೂರದಲ್ಲಿದ್ದ ಯುವಕನೊಬ್ಬ ಓಡುತ್ತಾ ಬಂದು ಅಜ್ಜ, ಮಳೆ ಬರುವ ಸನ್ನಿವೇಶವಾಗಿದೆ. ಮಳೆಯಿಂದ ನದಿ ಬಂದು ಕುರಿಗಳು ನದಿಯಲ್ಲಿ ಹೋಗುತ್ತವೆ. ನದಿಯ ತೀರದಲ್ಲಿದ್ದ ಕುರಿಗಳಿಗೆ ಮೇಲೆ ಹೊಡೆಯಿರಿ ಎಂದಾಕ್ಷಣ, ಬೊಮ್ಮಗೊಂಡೇಶ್ವರನು ನಗುತ್ತಾ ಇನ್ನು ಸಾಠಿ (೬೦) ದಿನ ಮಳೆ ಬರುವುದಿಲ್ಲಪ್ಪಾ! ಎಂದು ಹೇಳಿದನಂತೆ. ಬೊಮ್ಮಗೊಂಡೇಶ್ವರನ ಮಾತು ಕೇಳಿ ಯುವಕನಿಗೆ ಆಶ್ಚರ್ಯವಾಯಿತು ಮತ್ತು ಈ ವಿಷಯ ನಾಡಿನ ಎಲ್ಲ ಜನರಿಗೆ ಗೊತ್ತಾಯಿತು. ಕಾದು ನೋಡಿದರು 'ಸಾಠಿ' ಎಂದರೆ ಅರವತ್ತು ದಿವಸಗಳವರೆಗೆ ಮಳೆ ಬರಲೇ ಇಲ್ಲ. ನಂತರ ರವಿವಾರದಂದು ಮೂಸಲಧಾರೆಯಾಗಿ ಮಳೆ ಬಂತು. ಇದನ್ನು ವೀಕ್ಷಿಸಿದ ನಾಡಿನ ಎಲ್ಲಾ ಜನತೆ ಆಶ್ಚರ್ಯಗೊಳಗಾಗಿ, ಮಳೆ ಬರುವುದು ಅರಿತ ಬೊಮ್ಮಗೊಂಡೇಶ್ವರ ಎಂದು ನಾಡಿನ ಜನತೆ ಹೊಗಳಿದರು.''[೪]

ಹೀಗೆ ಬೊಮ್ಮಗೊಂಡೇಶ್ವರನಿಗೆ ಮಳೆ ಕುರಿತಂತೆ ಜ್ಞಾನವಿತ್ತು ಎಂಬುದನ್ನು ಈ ಪವಾಡಗಳಿಂದ ಗೊತ್ತಾಗುತ್ತದೆ.

**(೨) ಹಗಲಿನಲ್ಲಿ ನಕ್ಷತ್ರ ನೋಡುವ ಪವಾಡ :**

''ಬೊಮ್ಮಗೊಂಡೇಶ್ವರ ಹಗಲಿನಲ್ಲಿ ನಕ್ಷತ್ರವನ್ನು ನೋಡುತ್ತಿದ್ದನು. ಅಷ್ಟೇ ಅಲ್ಲ ಇತರರಿಗೂ ತೋರಿಸುತ್ತಾ ಆಶ್ಚರ್ಯಕರವಾದ ಪವಾಡಗಳನ್ನು ಮಾಡುತ್ತಿದ್ದರು. 'ಬಿಳಿ ನೆಲಗೊಳು' ಎನ್ನುವ ಒಂದು ಜಾತಿಯ ಹೂವು ತಂದು ಕರಿ ಕಂಬಳಿಯ ಕೆಳಗೆ ಇಟ್ಟು ಮೇಲೆ ಕೂತುಕೊಂಡು ಆಕಾಶ ನೋಡಿದರೆ ಹಗಲಿನಲ್ಲಿ ಚುಕ್ಕೆ ಕಾಣಿಸುತ್ತದೆ ಎನ್ನುವುದು ಪ್ರತೀತಿ. ಈ ತರಹದ ಯಾವುದಾದರೊಂದು ಜ್ಞಾನ ಅವರಿಗಿದ್ದಿರಬಹುದು.'[೫] ಅದಲ್ಲದೇ ನ್ಷತ್ರಗಳ ಅರಿವು ಅವರಿಗಿತ್ತು. ಈತನ ಕಾಲದಲ್ಲಿ ಸ್ಥಾಪಿತವಾದ ಮದರಸಾ ವಿಶ್ವ ವಿದ್ಯಾಲಯದಲ್ಲಿ ನಕ್ಷತ್ರದ ಕುರಿತಂತೆ ಅಂದರೆ ಖಗೋಳಶಾಸ್ತ್ರದ ಕುರಿತು ಅಧ್ಯಯನ ಜರುಗುತ್ತಿತ್ತು. ''ಇಲ್ಲಿ ಧಾರ್ಮಿಕ ವ್ಯಕ್ತಿಗಳು ಹಾಗೂ ಸಾಧು-ಸತ್ಪುರುಷರು ಇರಬಹುದಾಗಿತ್ತು. ಪ್ರಾಧ್ಯಾಪಕರಿಗೆ, ಧಾರ್ಮಿಕ ಸಾಧು-ಸತ್ಪುರುಷರಿಗೆ ಹಾಗೂ ವಿದ್ಯಾರ್ಥಿಗಳಿಗೆ ಬೇಕಾಗುವ ವಸತಿ ಸೌಕರ್ಯಗಳನ್ನು ಬೇರೆ ಬೇರೆಯಾಗಿ ಮಾಡಲಾಗಿತ್ತು.'[೬] ಎಂಬುದು ತಿಳಿದು ಬರುತ್ತದೆ.

ಬೀದರ ಕೋಟೆಯಷ್ಟೇ ಅಲ್ಲ ಮಧ್ಯ-ದಕ್ಷಿಣ ಭಾರತವೆಲ್ಲ ಸುತ್ತಾಡುತ್ತಿದ್ದ ಬೊಮ್ಮಗೊಂಡ ಗ್ರಹಗಳ, ನಕ್ಷತ್ರಗಳ ಕುರಿತಂತೆ ನಿಗೂಢ ಜ್ಞಾನವನ್ನು ಹೊಂದಿದ್ದ ಜೊತೆಗೆ ಮದರಸಾ ವಿಶ್ವವಿದ್ಯಾಲಯದ ಸಂಪರ್ಕದಲ್ಲಿ ಇದ್ದ. ''ಗೊಂಡಾರಣ್ಯ, ನರ್ಮದಾ, ಗೋದಾವರಿ, ಕೃಷ್ಣಾ ಜಲಾನಯನ ಪ್ರದೇಶ ಹಾಗೂ ವಿಂಧ್ಯ, ಸಾತಪುಡಾ, ಪಶ್ಚಿಮ ಘಟ್ಟಗಳ ಪ್ರದೇಶದ ಭೌಗೋಳಿಕ ಅರಿವು ಅವರಿಗಿತ್ತು. ಪರಿಸರ ಪ್ರೇಮಿಗಳಾಗಿದ್ದರಿಂದ ಅವರಿಗೆ ಪರಿಸರದ ಅರಿವು, ಖಗೋಳದ ಜ್ಞಾನವೂ ಇತ್ತು.'[೭] ಹೀಗಾಗಿ

---

**ಅಡಿ ಟಿಪ್ಪಣಿ :**

೪. ಮಾಳಪ್ಪ ಅಡಸಾರೆ ಏಕಲಾರ (೩೫) ರವರ ಹೇಳಿಕೆ

೫. ಸಿದ್ಧಯ್ಯ ಆಧುನಿಕ ಒಡೆಯರ್, ಗೊಂಡ ಹಾಗೂ ಕುರುಬರ ಧರ್ಮಗುರು

೬. 'ಮಹಮೂದ ಗವಾನ' : ಲೇ: ಎಲ್.ಆರ್.ಕುಲಕರಣಿ, ಪು.೧೮.

೭. 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂ. ಎಚ್.ಸಿ.ಶಿವಕುಮಾರ, ಪು.೧೭.

ಹಗಲಿನಲ್ಲಿ ನಕ್ಷತ್ರ ನೋಡುವ ಹಾಗೂ ಇತರರಿಗೆ ತೋರಿಸುವ ಪವಾಡ ಮಾಡಿರಲು ಸಾಧ್ಯ. ಈತನ ಕುರಿತಂತೆ ಗಾಣಿಗರ ಸಿದ್ಧಪ್ಪ ಎಂಬುವವನು ರಚಿಸಿದ ವಚನವೊಂದರಲ್ಲಿ ಹೀಗೆ ಹೇಳಿದ್ದಾನೆ -

ಆದಿ, ಮಧ್ಯ, ಅಂತ್ಯಗಳ ತ್ರಿಕಾಲಜ್ಞಾನಿ
ವೇದ, ಶಾಸ್ತ್ರ ಪುರಾಣಾಗಮ
ಉಪಷತ್ತುಗಳ ಗಂಗೋತ್ರಿ
ಹದಿನೆಂಟು ಪುರಾಣಗಳು ಬೆರಳಕ್ಷರ
ಜೋತಿಷ್ಯ ಶಾಸ್ತ್ರ ಸಂಜ್ಞೆಯಲ್ಲಿ

ಈ ವಚನ ಬೊಮ್ಮಗೊಂಡೇಶ್ವರನ ಜ್ಞಾನದ ಹರವನ್ನು ಸೂಚಿಸುತ್ತದೆ. ಇದಕ್ಕೆ ಪೂರಕವೆಂಬಂತೆ ಗ್ರಹ-ನಕ್ಷತ್ರಗಳ ಕುರಿತ ಜ್ಞಾನವಿದ್ದುದು ಕಂಡು ಬರುತ್ತದೆ.

**(೩) ತೋಳದಿಂದ ಕುರಿಗಳನ್ನು ರಕ್ಷಣೆ ಮಾಡಿದ ಪವಾಡ :**

''ಒಂದು ದಿನ ಗೊಂಡಾರಣ್ಯದಲ್ಲಿ ಕುರಿ ಮೇಯಿಸುತ್ತಿದ್ದಾಗ ತೋಳ ಬಂತು. ಅದನ್ನು ಕಂಡು ಕುರಿಗಳು ಚದುರಿ ಓಡಿದವು. ಬೊಮ್ಮಗೊಂಡ ತೋಳನಿಗೆ ಕೈಮಾಡಿ ಕರೆದ, ತೋಳ ಬಾಲ ಅಲ್ಲಾಡಿಸುತ್ತ ಹತ್ತಿರ ಬಂತು. ತೋಳಣ್ಣಾ ನೀನು ಪದೇ ಪದೇ ಕುರಿಗಳನ್ನು ನಾಶ ಮಾಡುತ್ತಿರುವೆ, ಹಾಗೆ ಮಾಡಬೇಡ, ಕೇಳದಿದ್ದರೆ ಮೈಲಾರಲಿಂಗನ ಹತ್ತಿರ ಇರುವ ನಾಯಿಗಳಿಗೆ ಕರೆಸುತ್ತೇನೆ ಎಂದಾಗ ತೋಳ ಹೆದರಿ ಓಡಿ ಹೋಯಿತು. ಆದುದರಿಂದ ಇಂದಿಗೂ ಕುರಿ ಕಾಯುವವರು ತಮ್ಮೊಂದಿಗೆ ನಾಯಿಗಳನ್ನು ಸಾಕಿರುತ್ತಾರೆ. ನಾಯಿ ಎಂದರೆ ಮಲ್ಲಯ್ಯನೆಂದು ಭಾವಿಸುತ್ತಾರೆ. ಮೈಲಾರ ಲಿಂಗನ ವಗ್ಗಯ್ಯಗಳು ಹಾಡು ಹೇಳಿ ಕುಣಿಯುವಾಗ ನಾಯಿಗಳಂತೆ ಬೊಗಳುತ್ತಾರೆ.'' [೮] ಇತಿಹಾಸದಲ್ಲಿ ಆಗಿ ಹೋದಂಥ ಅನೇಕ ಮಹಾ ಪುರುಷರಿಗೆ ಪ್ರಾಣಿಗಳ ವಶೀಕರಣ ಕಲೆ ಗೊತ್ತಿರುವುದನ್ನು ತಿಳಿದು ಬರುತ್ತದೆ. ರಾಮಕೃಷ್ಣ ಪರಮಹಂಸ, ವಿವೇಕಾನಂದ, ಅಕ್ಕಮಹಾದೇವಿ ಮುಂತಾದವರಿಗೆ ಪ್ರಾಣಿಗಳನ್ನು ಸಮ್ಮೊಹನ ಮಾಡುವ ಶಕ್ತಿ ಇದ್ದದ್ದು ಕಂಡು ಬರುತ್ತದೆ. ಇದಲ್ಲದೇ ಇಂದಿಗೂ ದೇವ-ದೇವತೆಗಳ ಭಾವಚಿತ್ರದಲ್ಲಿ ಪ್ರಾಣಿ ಪಕ್ಷಿಗಳ ಚಿತ್ರಗಳಿರುವುದೂ ಕಾಣಬಹುದಾಗಿದೆ. ಇದು ಮಹಾತ್ಮರಿಂದ ಪ್ರಾಣಿಗಳು ವಶೀಕರಣಕ್ಕೊಳಗಾಗುತ್ತಿದ್ದವು ಎನ್ನುವುದಕ್ಕೆ ಸಾಕ್ಷಿ.

**(೪) ಹಾವು ಕಡಿದ ಮಗುವನ್ನು ರಕ್ಷಿಸಿದ್ದು :**

''ಒಂದು ದಿನ ಗೊಂಡಾರಣ್ಯದಲ್ಲಿ ಒಂದು ಮಗುವಿಗೆ ಹಾವು ಕಡಿದು ಮರಣವನ್ನಪ್ಪಿತು. ತಾಯಿ ಮಗುವನ್ನು ರಕ್ಷಿಸುವಂತೆ ಕೇಳಿಕೊಂಡಳು. ತಾಯಿಯ ರೋಧನ ಕಂಡು ಮಗುವಿಗೆ ಪರೀಕ್ಷಿಸಿ, ಮಂತ್ರ ಪಠಿಸಿ, ತಮ್ಮ ಸಿದ್ಧಿ ಸಾಧನೆಯಿಂದ ಹಾವುಗಳಿಗೆ ಕರೆದಾಗ ಹಾವುಗಳು ಪ್ರತ್ಯಕ್ಷಗೊಂಡವು. ಆದರೆ ಯಾವ ಹಾವಿನ ವಿಷದಿಂದ ಮಗು ಮರಣವನ್ನಪ್ಪಿತೋ ಆ ಹಾವು ಬರಲಿಲ್ಲ.

**ಅಡಿ ಟಿಪ್ಪಣಿ :**

೮. 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂ. ಎಚ್.ಸಿ.ಶಿವಕುಮಾರ, ಪು.೧೭.

ಆಗ ಬೊಮ್ಮಗೊಂಡನು ಆ ಹಾವನ್ನು ಆಹ್ವಾನಿಸಿ ಮಗುವಿನ ವಿಷವನ್ನು ಪಾನ ಮಾಡಲು ಹೇಳಿದರು. ಹಾವು ಹಾಗೆಯೇ ಮಾಡಿತು. ಮಗುವಿಗೆ ಗಿಡಮೂಲಿಕೆ ಹಾಗೂ ಮಂತ್ರ ಹಾಕಿ ಎಚ್ಚರಗೊಳಿಸಿದರು. ಇಂತಹ ಅನೇಕ ಜನೋಪಕಾರಿ ಸೇವೆಗಳಿಗೆ ಮನಸೋತು ಅವರ ವಿರೋಧಿಗಳು ಕೂಡ ಇವರ ದಿವ್ಯ ಬೋಧನೆಯಿಂದ ಪರಶಿವನ ನಾಮಸ್ಮರಣೆಯಲ್ಲಿ ತನ್ನನ್ನು ತೊಡಗಿಸಿಕೊಂಡನು. ಹೀಗಾಗಿ ಅವರ ಭಕ್ತ ಮಂಡಳಿ ಹೆಚ್ಚಿದಂತೆ ಅವರ ಮಹಿಮೆ ಹೆಚ್ಚಾಗತೊಡಗಿತ್ತು''.[೯] ಈ ಪವಾಡದಿಂದಲೂ ಬೊಮ್ಮಗೊಂಡೇಶ್ವರನಿಗೆ ಪ್ರಾಣಿಗಳ ವಶೀಕರಣ ಜ್ಞಾನವಿತ್ತು ಎಂಬುದು ಹಾಗೂ ಜನಪದ ವೈದ್ಯ ಪದ್ಧತಿಯ ಕುರಿತು ಅರಿವಿದ್ದುದನ್ನು ಗೊತ್ತಾಗುತ್ತದೆ.

**(೫) ತನ್ನ ಹಣೆಯಲ್ಲಿ ಸೂರ್ಯನನ್ನು ತೋರಿಸಿದ ಪವಾಡ :**

''ಒಂದು ದಿನ ಶರಣರ ಮೇಳ ಸೇರಿತ್ತು. ಒಬ್ಬ ಶರಣ ಎದ್ದು ಸೂರ್ಯಾಸ್ತವಾಗಿದೆ ಸಭೆಗೆ ಮಂಗಳ ಹಾಡಿರಿ ಎಂದು ಹೇಳುತ್ತಿರಲು ಬೊಮ್ಮಗೊಂಡನು ತಮ್ಮ ಮಹಿಮೆ ಹೀಗೆ ತೋರಿಸಿದರು. 'ಜ್ಞಾನ ಎಂಬುದು ಸೂರ್ಯನಿದ್ದ ಹಾಗೆ ಅದು ಎಂದೂ ಅಸ್ತ ಆಗದು. ಅದು ಜ್ಞಾನಿಗಳ ಹಣೆಯಲ್ಲಿ ಸದಾ ಬೆಳಕಾಗಿರುತ್ತದೆ' ಎಂದು ತನ್ನ ಹಣೆಯಲ್ಲಿ ಸೂರ್ಯನನ್ನು ತೋರಿಸುತ್ತಾನೆ. ಶರಣರು ಅದಕ್ಕೆ ತಲೆದೂಗುವರು.'[೧೦]

ಹೀಗೆ ಬೊಮ್ಮಗೊಂಡೇಶ್ವರನು ನೂರಾರು ಪವಾಡಗಳನ್ನು ಮಾಡಿದ್ದು ತಿಳಿದು ಬರುತ್ತದೆ. ಇತಿಹಾಸದಲ್ಲಿ ಆಗಿ ಹೋದಂತಹ ಅನೇಕ ಮಹಾಪುರುಷರ ಸುತ್ತ ಪವಾಡಗಳು ಹಣೆದುಕೊಂಡಿರುತ್ತವೆ. ಪವಾಡಗಳಿಗೆ ಮಾಂತ್ರಿಕತೆಯ ಲೇಪ ಕೂಡ ಬಳಿದು ಅದಕ್ಕೆ ಹೆಚ್ಚಿನ ಮೆರಗನ್ನು ತಂದುಕೊಡುತ್ತಾರೆ. ವ್ಯಕ್ತಿಯೊಬ್ಬನನ್ನು ಮಹಾನ್‌ಗೊಳಿಸುವಲ್ಲಿ ಇವುಗಳ ಪಾತ್ರ ಹಿರಿದಾಗಿರುತ್ತದೆ. ಒಂದು ದೊಡ್ಡ ಬಂಡೆಗಲ್ಲನ್ನು ಎತ್ತುವುದು ದಂಡಾಳುಗಳಿಗೆ ಸಾಧ್ಯವಾಗಿಲ್ಲ, ಆದರೆ ಬೊಮ್ಮಗೊಂಡೇಶ್ವರನು ತಮ್ಮ ಕೈಯಲ್ಲಿ ಇರುವು ಒಂದು ವಂಕನ ಬಡಿಗೆಯಿಂದ ಬಂಡೆಗಲ್ಲನ್ನು ಎತ್ತಿದನು. ಇದು ಜನಸಾಮಾನ್ಯರು ಅವನ ಪವಾಡಗಳ ಸಾಲಿನಲ್ಲಿ ಸೇರಿಸಿದರು. ದಿನಾಲೂ ಬಂಡೆಗಲ್ಲು ಎತ್ತಿ ಇಡುತ್ತಿದ್ದ ಬೊಮ್ಮಗೊಂಡೇಶ್ವನಿಗೆ ಇದು ಕಷ್ಟವೇನು ಅನಿಸಲಿಲ್ಲ. ದಿನ ನಿತ್ಯ ಮಾಡುವ ಯಾವುದೇ ಕ್ಲಿಷ್ಟ ಕೆಲಸ ಸರಳಗೊಳ್ಳುವುದು ಸಾಮಾನ್ಯ. ಆ ಹಿನ್ನೆಲೆಯಲ್ಲಿ ಈ ಘಟನೆಯನ್ನು ನೋಡಿದರೆ ಅಂತಹ ಉತ್ಪ್ರೇಕ್ಷತೆಯೇನೂ ಕಾಣುವುದಿಲ್ಲ. ಆದರೆ ಜನಪದರ ದೃಷ್ಟಿಯಲ್ಲಿ ಅದು ಮಹತ್ ಕಾರ್ಯಗಳ ಸಾಲಿನಲ್ಲಿ ಸೇರುತ್ತದೆ. ಇಂತಹ ಘಟನೆಗಳು ಜನಪದರ ಬಾಯಲ್ಲಿ ಕೆಲವು ಸಲ ಐತಿಹ್ಯವಾಗಿ ಕೆಲವು ಸಲ ಪವಾಡವಾಗಿ ಪ್ರಚಾರಗೊಳ್ಳುತ್ತವೆ. ಇವರು ಯಾವಾಗಲೂ ಮಹತ್ ಶಕ್ತಿಗಳಿಗೆ ದೈವಿ ಶಕ್ತಿಯೆಂದೇ ಪರಿಭಾವಿಸುತ್ತಾರೆ. ಬೆಳಕು ನೀಡುವ ಸೂರ್ಯ, ಅನ್ನ ನೀಡುವ ಭೂಮಿ, ಜೀವ ಕಾಪಾಡುವ ನೀರು ಎಲ್ಲವುಗಳಿಗೆ ದೈವಿಶಕ್ತಿಯು ಕಾರಣ ಎಂಬುದು ಈ ಹಿನ್ನೆಲೆಯಲ್ಲಿಯೇ. ವ್ಯಕ್ತಿಯ ವಿಶೇಷ ಜ್ಞಾನ, ವಿಶಿಷ್ಟ

---

**ಅಡಿ ಟಿಪ್ಪಣಿ :**

೯. 'ಕನಕ ಸ್ಪೂರ್ತಿ' ಮಾಸ ಪತ್ರಿಕೆ, ಸಂ. ಎಚ್.ಸಿ.ಶಿವಕುಮಾರ, ಪು.೧೫.

೧೦. - ಅದೇ - ಪು.೧೫.

ಶಕ್ತಿ, ಶ್ರೇಷ್ಠ ಕಾರ್ಯ ಇವುಗಳಿಗೆ ದೈವೀಕತೆಯ ಇಲ್ಲವೆ ಪವಾಡದ ಸಾಧನಗಳಿಂದ ನೋಡಿ ಹಾಡಿ ಹೊಗಳುತ್ತಾರೆ. ಇಲ್ಲಿ ವ್ಯಕ್ತಿಯೊಬ್ಬನಲ್ಲಿ (ಜ್ಞಾನ) ವಿಕಾಸವಿದೆ ಅಥವಾ ಸಾಮಾಜಿಕ ಕಳಕಳಿ ಇದೆ. ಇದನ್ನು ಗುರುತಿಸಿದ ಜನಪದರು ಪವಾಡ ಪುರುಷ ಎನ್ನುವಂತೆ ಆತನನ್ನು ಗುರುತಿಸುತ್ತಾರೆ.

ಬೊಮ್ಮಗೊಂಡೇಶ್ವರನ ಪವಾಡಗಳು ತಾರ್ಕಿಕವಾಗಿ ನೋಡಿದರೆ ಇವರೊಬ್ಬ ವಿಶಿಷ್ಟ ವ್ಯಕ್ತಿ ಎಂಬುದು ಗೊತ್ತಾಗುತ್ತದೆ. ಸಾಮಾನ್ಯಕ್ಕಿಂತ ಒಂದಿಷ್ಟು ಮುಂದೆ ಹೋಗಿ ನಿಂತು ಪ್ರಕೃತಿಗೆ ಹತ್ತಿರನಾಗಿ ಪ್ರಕೃತಿ ನಿಗೂಢಗಳನ್ನು ಅರಿತಿದ್ದಾರೆ. ಈ ಕಾರಣದಿಂದ ಮಳೆ ಬರುವ ನಿಗೂಢವನ್ನು, ಹಗಲಿನಲ್ಲಿ ನಕ್ಷತ್ರ ನೋಡುವ ಕಲೆಯನ್ನು ಅರಿತಿದ್ದಾನೆ. ಒಬ್ಬ ಕುರಿಗಾಹಿಯಾಗಿದ್ದರಿಂದ ತೋಳದ ಬಾಯಿಗೆ ಕುರಿಗಳು ಬಲಿಯಾಗದ ಹಾಗೆ ಏನಾದರೂ ಉಪಾಯ ಕಂಡುಕೊಂಡಿರಲು ಸಾಕು. ಕಾಡು-ಅಡವಿಯಲ್ಲಿ ಓಡಾಡುವವರಿಗೆ ಹುಳು-ಹುಪ್ಪಡಿಗಳು, ಹಾವು-ತೇಳುಗಳು ಕಡಿದರೆ ಗಿಡ ಮೂಲಿಕೆ ಗೊತ್ತಿರುವುದು ಸಹಜ ಬೊಮ್ಮಗೊಂಡೇಶ್ವರನಿಗೂ ಇದರ ಅರಿವು ಇದ್ದಿರಬಹುದು. ಅಪಘಾತಕ್ಕೊಳಗಾದವರಿಗೆ ಇಂಥವರು ಪರಿಹಾರ ಒದಗಿಸುವುದು ಸಹಜವಿದೆ. ಇನ್ನೂ ಹಣೆಯಲ್ಲಿ ಸೂರ್ಯನನ್ನು ಬೊಮ್ಮಗೊಂಡ ತೋರಿಸುತ್ತಿದ್ದ ಎನ್ನುವ ಪವಾಡವೊಂದಿದೆ. ಅನೇಕ ಮಹಾತ್ಮಿಕರು ಮೂರನೆ ಕಣ್ಣು ಹೊಂದಿರುತ್ತಾರೆ ಎನ್ನುವುದು ಸಾಕಷ್ಟು ಕೇಳಿದ್ದೇವೆ. ಎರಡು ಕಣ್ಣುಗಳ ಮಧ್ಯ ಅಗ್ನಿ ಚಕ್ರವಿರುತ್ತದೆ ಅದು ಯೋಗ ಸಾಧನೆಯಿಂದ ಸಾಧಿಸಬಹುದು ಎನ್ನಲಾಗುತ್ತದೆ. ಆಧ್ಯಾತ್ಮಿಕ ಒಲವುಳ್ಳವರು ಯೋಗಸಾಧನೆಯಲ್ಲಿ ತೊಡಗುತ್ತಾರೆ. ಇಂಥ ಸಾಧನೆ ಬೊಮ್ಮಗೊಂಡೇಶ್ವರನು ಪಡೆದಿದ್ದನು ಎನ್ನಬಹುದು. ''ಲೀಲೆಗಳು ದೇವರಿಂದ ನಡೆದರೆ, ಪವಾಡಗಳು ಮಾನವರಿಂದ ಆಗುವುದು. ಆದಿ ಮಾನವನಿಂದಲೂ ಈ ಪವಾಡಗಳ ನಂಬುಗೆ ಇದೆ. ಪ್ರಕೃತಿಯಲ್ಲಿ ನಡೆವ ಪ್ರತಿಯೊಂದು ಕೆಲಸವೂ ಅಲೌಕಿಕ ಶಕ್ತಿಯಿಂದಾಗುವುದೆಂದು ಭಾವಿಸಿದ. ಯೋಗ ಸಾಧನೆಯಿಂದ ಸಿದ್ಧಿ ಪ್ರಾಪ್ತವಾಗುವುದು. ಇದರಿಂದ ಪವಾಡ ಎಸಗುವ ಶಕ್ತಿ ಉಂಟಾಗುತ್ತದೆ.'[೧೧] ಈ ದೃಷ್ಟಿಯಿಂದ ಬೊಮ್ಮಗೊಂಡೇಶ್ವರನನ್ನು ನೋಡಿದರೆ ಇವರ ಪವಾಡಗಳು ವೈಯಕ್ತಿಕ ಸಾಧನೆಯಿಂದ ಕೂಡಿದ್ದವು ಎಂಬುದನ್ನು ಅರಿಯಬಹುದಾಗಿದೆ.

ಹೀಗೆ ಬೊಮ್ಮಗೊಂಡೇಶ್ವರ ಎಸಗಿದ ಪವಾಡಗಳು ಸಾಮಾನ್ಯ ಜನರಿಗೆ ಎಟುಕುವಂಥ (ಮಾಡುವಂಥ) ವುಗಳಲ್ಲ. ಅಸಾಮಾನ್ಯ ವ್ಯಕ್ತಿತ್ವ ಹೊಂದಿರುವ ಬೊಮ್ಮಗೊಂಡೇಶ್ವರನ ವಿಶಿಷ್ಟ ಜ್ಞಾನ, ತೀಕ್ಷ್ಣ ಬುದ್ಧಿ, ಪರಿಶ್ರಮ ಶೀಲನಾಗಿದ್ದು ಆಧ್ಯಾತ್ಮಿಕ ಒಲವುಳ್ಳವನಾಗಿದ್ದರಿಂದ ಸಾಮಾನ್ಯರು ಮಾಡದ ಕೆಲಸಗಳು ಇವರಿಗೆ ಮಾಡಲು ಸಾಧ್ಯವಾಯಿತು. ಹಿಂದುಳಿದ ಬುಡಕಟ್ಟು (ಗೊಂಡ) ಒಂದರಲ್ಲಿ ಈತ ಹುಟ್ಟಿ ಎಲ್ಲರಿಗೂ ಬೆರಗು ಉಂಟು ಮಾಡಿದುದರ ಜೊತೆಗೆ ಅತಿಮಾನುಷ ವ್ಯಕ್ತಿಯಾಗಲೂ ಅಥವಾ ಪವಾಡ ಪುರುಷನಾಗಲೂ ಕಾರಣವಾಯಿತು. ಈ ಪವಾಡಗಳು ಕಾರಣವಾಗಿ ಬೊಮ್ಮಗೊಂಡೇಶ್ವರನು ಇಂದಿಗೂ ಜನಪದರ ನಡುವೆ ಜೀವಂತ ಇದ್ದುದ್ದು ಗಮನಕ್ಕೆ ಬರುತ್ತದೆ.

- - -

ಅಡಿ ಟಪ್ಪಣಿ :

೧೧. 'ಜಾನಪದ ಸೌರಭ' ಡಾ. ಬಿ.ಎಸ್.ಸ್ವಾಮಿ, ಪು. ೩೫೧.

# ಆಧಾರ ಗ್ರಂಥಗಳು

(೧) 'ಜಾನಪದ ಸೌರಭ'
ಬಿ.ಎಸ್. ಸ್ವಾಮಿ
ಗೋರಕ್ಷನಾಥ ಪ್ರಕಾಶನ, ಬೆಂಗಳೂರು - ೧೯೯೩.

(೨) 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂಪುಟ ೪, ಸಂಚಿಕೆ ೪, ನವೆಂಬರ ೧೯೯೭.
ಸಂ. ಎಚ್.ಸಿ. ಶಿವಕುಮಾರ
ಲೇಖನ : 'ನಿರ್ಲಕ್ಷಿತ ಇತಿಹಾಸದಲ್ಲಿ ಬೊಮ್ಮಗೊಂಡೇಶ್ವರರ ಚರಿತ್ರೆ'
ಲೇಖಕರು : ಡಾ॥ ಕೆ.ಎಂ. ಮೈತ್ರಿ
ಕನಕ ಪ್ರತಿಷ್ಠಾನ, ಶ್ರೀ ಕಾಗಿನೆಲೆ ಮಹಾ ಸಂಸ್ಥಾನ, ಕನಕ ಗುರುಪೀಠ ,
ಕಾಗಿನೆಲೆ - ೫೮೧ ೧೫೩.

(೩) 'ಮಹಮೂದ ಗವಾನ'
ಎಲ್.ಆರ್.ಕುಲಕರ್ಣಿ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
ಮೇ, ೧೯೬೯.

## ೫. ಬೊಮ್ಮಗೊಂಡೇಶ್ವರನ ಕೆರೆ, ದೇವಾಲಯ ಹಾಗೂ ಮೂರ್ತಿಗಳ ಸ್ಥಾಪನೆ

**ಬೊಮ್ಮಗೊಂಡೇಶ್ವರನ ಕೆರೆ ಹಾಗೂ ಗುಡ್ಡ :**

ಬೀದರ ಕೋಟೆಯೊಳಗೆ ಬೊಮ್ಮಗೊಂಡೇಶ್ವರನ ಹೆಸರಿನ ಒಂದು ಕೆರೆ ಇದೆ. ಇದಕ್ಕೆ 'ಬೊಮ್ಮಗೊಂಡನ ಕೆರೆ' ಎಂದೇ ಜನರು ಕರೆಯುತ್ತಾರೆ. ಈ ಕೆರೆಯ ನೀರು ಎಂದೂ ಬತ್ತಿ ಹೋಗುವುದಿಲ್ಲ. ಕೆರೆಯ ಬಳಿಯಲ್ಲಿ ಆಗಾಗ ಅಂದರೆ ಹಬ್ಬ ಹರಿದಿನಗಳಲ್ಲಿ ಪೂಜೆ, ಅನ್ನ ದಾಸೋಹ ಇಲ್ಲಿಯ ಜನ ಮಾಡುತ್ತಿದ್ದರು. ಆದರೆ ಅದು ಇತ್ತೀಚಿಗೆ ನಿಂತು ಹೋಗಿದೆ. ಈ ಕೆರೆಗೆ ಹತ್ತಿ ಕೊಂಡಂತೆ ವೀರಸಂಗಯ್ಯನ ದೇವಾಲಯವಿದೆ. ಈ ಕೆರೆಯಲ್ಲಿ ಈಗಲೂ ಸಾಕಷ್ಟು ನೀರಿದೆ. ಇದಕ್ಕೆ ಹತ್ತಿಕೊಂಡಂತೆ ಸ್ವಲ್ಪ ಭಾಗ ಕೋಟೆಯು ಕಟ್ಟಲಾಗಿದೆ. ಇಲ್ಲಿ ನೀರು ಎಲ್ಲಿಂದ ಬರುತ್ತವೆ ಎನ್ನುವುದೇ ಆಶ್ಚರ್ಯದ ಸಂಗತಿ, ಕಾಲಜ್ಞಾನ ವಚನವೊಂದರಲ್ಲಿ ಕೆರೆಯ ಪ್ರಸ್ತಾಪ ಈರೀತಿಯಾಗಿ ಬಂದಿರುತ್ತದೆ -

''ಬೊಮ್ಮಗೊಂಡನ ಕೆರಿ ಮ್ಯಾಲ
ಹುರದಳ್ಳು ಆದಾತಣ್ಣ
ಲೆಕ್ಕಿಲ್ಲದ ಕರಿಗಾಗಿ ಬಂದು ಕೀಲಾದ (ಕೋಟಿ) ಮ್ಯಾಲ ನೀರ
ಕೊಂಡಾತಣ್ಣ''[೧]

ಈ ಕೆರೆಯ ನೀರನ್ನೇ ಬೊಮ್ಮಗೊಂಡೇಶ್ವರನು ಬಹಮನಿ ಅರಸ ಸುಲ್ತಾನ-ಎ-ಅಹಮದಷಾನಿಗೂ ಹಾಗೂ ಆತನ ದಂಡಾಳುಗಳಿಗೂ ಕುಡಿಸಿದನು ಎಂಬುದು ತಿಳಿದುಬರುತ್ತದೆ. ಜೊತೆಗೆ ಬರಗಾಲಿನ ಸಂದರ್ಭದಲ್ಲಿ ಈ ಕೆರೆಯ ನೀರೇ ಜನರಿಗೂ ಪಶು ಪಕ್ಷಿಗಳಿಗೂ ವರದಾನವಾಗಿತ್ತು. ಈ ಕೆರೆಯ ನಡುವೆ ಒಂದು ಬಾವಿ ಇದ್ದು ಅದರಲ್ಲಿ ಬೊಮ್ಮಗೊಂಡನು ತನ್ನಲ್ಲಿರುವ ಪರುಷದ ಬೊಂಬೆಯನ್ನು ಇಟ್ಟಿದ್ದು ಕಾಲಾನಂತರ ಅದನ್ನು ಮಹಾರಾಷ್ಟ್ರದ ಔರಂಗಾಬಾದನಲ್ಲಿರುವ 'ಬಿಬಿ ಕಾ ಮಕಬರಾ' (ಮಿನಿ ತಾಜಮಹಲ)ದ ಕೆಳಗೆ ಹೂತಿಡಲಾಗಿದೆ ಎಂದು ಜನಪದರ ನಂಬಿಕೆ. ಕೆರೆಯ ಕುರಿತಂತೆ ಜನಪದ ಹಾಡಿನ ಕೆಲವು ಸಾಲುಗಳು ಈ ರೀತಿಯಾಗಿವೆ.

''ಬೀದರ ಕೋಟೆಯೊಳಗೆ ಐತಿ ಬೊಮ್ಮಗೊಂಡನ ಕೆರೆಯು
ಶರಣು ಶರಣು ಬೊಮ್ಮಗೊಂಡೇಶ ಭೂಮಿಗೆ ಬಂದ ಜಗದೀಶ
ಅಲ್ಲಿ ಸ್ನಾನ ಮಾಡಲು ನಿನಗೆ ದೊರೆವುದು ಮುಕ್ತಿಯು
ತಮ್ಮ ದೊರೆಯುವುದು ಮುಕ್ತಿಯು'

'ಕೋಟಿ ನಡು ಕೆರೆ ಕಟಿಸ್ಯಾರ
ಇಲ್ಲಿ ಝುಳಕ ಮಾಡು ಒಮ್ಯಾರ'

---

**ಅಡಿ ಟಿಪ್ಪಣಿ :**

೧. 'ಬೀದರ ಜಿಲ್ಲಾ ದರ್ಶನ' ಸಂ. ಡಾ|| ಜಗನ್ನಾಥ ಹೆಬ್ಬಾಳೆ, ಪು.೧೬೬.

'ಕೆಲ ನಡು ಭಾವಿ ಐತಂತ
ಭಂಗಾರ ಮೂರ್ತಿ ಅಲ್ಲಿ ಇತ್ತಂತ'

'ಮೂರ್ತಿ ದಿವಸ ಮುಕುತ ಮಾರುತ ಅನ್ನ ದಾಸೋಹ ಮಾಡಿಸುತ
ಬರಗಾಲದಾಗ ಅನ್ನ ನೀಡಿ ಬೊಮ್ಮಗೊಂಡನಾದ ಭಗವಂತ'[೧]

ಈ ಕೆರೆಯಲ್ಲಿ ಪರುಷ ಬೊಂಬೆಯನ್ನು ಬಚ್ಚಿಟ್ಟು ಬಹಮನಿ ಅರಸನಿಗೆ ಕೋಟೆ ಕಟ್ಟಲು ಆ ಬೊಂಬೆಯನ್ನೇ ದಿನಾಲು ಸ್ವಲ್ಪ ಸ್ವಲ್ಪ ಕಟಿದು ಕೊಡುತ್ತಿದ್ದ ಜೊತೆಗೆ ಬರಗಾಲದಲ್ಲಿ ಅನ್ನ ದಾಸೋಹ ನಡೆಸುತ್ತಿದ್ದ ಎಂಬುದೊಂದು ಪ್ರತೀತಿ ಇದೆ. ಇಂಥ ಸ್ಥಳೀಯವಾಗಿ ಕಂಡು ಬರುವ ಕೆರೆಗಳು ತಮ್ಮದೇ ಆದಂತಹ ಹೆಸರುಗಳನ್ನು ಹೊಂದಿರುತ್ತವೆ. ''ಕೆರೆಗಳನ್ನು ಅನೇಕ ಉದ್ದೇಶಗಳಿಗೆ ನಿರ್ಮಿಸಿಕೊಳ್ಳುವುದು ನಮಗೆಲ್ಲ ತಿಳಿದಿರುವ ವಿಷಯವೇ ಇವುಗಳನ್ನು ಸ್ಥಳೀಯವಾಗಿ ಪಾಳೆಗಾರರು, ರಾಜ ರಾಣಿಯರು, ಸಂತರು ಹಾಗೂ ಮಹಿಳೆಯರು ನಿರ್ಮಿಸಿ ನಿರ್ವಹಿಸಿರುವುದಕ್ಕೆ ಬಹುಸಂಖ್ಯಾಧಾರಗಳು ಲಭ್ಯವಾಗಿವೆ. ಆದರೆ ಮೌಖಿಕವಾಗಿ ನಮ್ಮ ಜನ ಪುರಾಣ ಕಥೆಗಳಿಗೆ ಹೆಚ್ಚಿನ ಆದ್ಯತೆ ನೀಡುವುದರಿಂದ ಇವರಿಗೆ ಅಲ್ಲಿ ದೊರಕುವಂತಹ ಪುರಾಣ ಪುರುಷರು, ದೇವಾನುದೇವತೆಗಳು ನಿರ್ಮಿಸಿದರೆಂದು ಹೇಳಿಕೊಳ್ಳುವುದರಲ್ಲಿ ಸ್ವಲ್ಪವೂ ತಿರುಳಿರುವುದಿಲ್ಲ ಇಂತಹ ಸಮಸ್ಯೆಯ ಜೊತೆಗೆ ಇಂದು ಆಧುನಿಕತೆಯ ಎಡೆಗೆ ವಾಲುತ್ತಿರುವ ನಮ್ಮ ಸಂಸ್ಕೃತಿಯು ನಮ್ಮ ಪೂರ್ವಿಕರ ಹೆಸರುಗಳನ್ನು ಹಾಗೂ ಆ ಹೆಸರಿನ ಹಿಂದೆ ಇರುವಂತಹ ಇತಿಹಾಸವನ್ನು ಸಂಪೂರ್ಣವಾಗಿ ಮರೆಯುತ್ತಿರುವುದು ಕಂಡು ಬರುತ್ತದೆ.'[೨] ಅದಕ್ಕಾಗಿ ಅವುಗಳನ್ನು ಹಿಡಿದಿಡುವುದು ಮುಖ್ಯವಾಗುತ್ತದೆ. ಬೊಮ್ಮಗೊಂಡನ ಕೆರೆಗೆ ಆರೋಪಿಸಿ ಹೇಳುವ ಐತಿಹ್ಯ ಕಥೆಗಳು ತುಂಬಾ ರೋಚಕವಾದವುಗಳು. ಜೊತೆಗೆ ಕೆರೆಗೆ ಪಾವಿತ್ರ್ಯತೆ ತಂದು ಕೊಡುವ ಮೂಲ ಉದ್ದೇಶವು ಹೊಂದಿರುತ್ತದೆ. ಕೋಟೆಯ ಒಳ ಭಾಗದಲ್ಲಿ ಕಂಡು ಬರುವ ಈ ಕೆರೆ ಹಾಗೂ ಸುತ್ತಮುತ್ತಲಿನ ಪ್ರದೇಶವನ್ನು 'ಒಳಕೋಟೆ' ಎಂತಲೂ ಕರೆಯುವುದುಂಟು. ಇಲ್ಲಿ ಅನೇಕ ಜನರು ಹಟ್ಟಿಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದಾರೆ. ನೀರಿನ ಅನುಕೂಲವಿದ್ದುದ್ದರಿಂದ ಒಕ್ಕಲುತನವೂ ಸಾಧ್ಯವಾಗಿದೆ. ಇಲ್ಲಿ ಕಾಳಿಕಾ ಮಂದಿರವೊಂದು ಇದ್ದು ಜಿಲ್ಲೆಯ ವಿವಿಧ ಕಡೆಯಿಂದ ಜನರು ಇಲ್ಲಿಗೆ ಬರುತ್ತಾರೆ.

ಮುಖ್ಯವಾಗಿ ಹೇಳಬೇಕೆಂದರೆ ಈ ಕೆರೆ ಐತಿಹಾಸಿಕ ಮಹತ್ವ ಪಡೆದಿದೆ ಎನ್ನಬಹುದು. ಏಕೆಂದರೆ ಬಹಮನಿ ಅರಸನಿಗೆ ಈ ಕೆರೆಯಿಂದ ನೀರು ಕುಡಿಸುವಾಗ ಬಂಡೆಗಲ್ಲನ್ನು ಹೊರಳಿಸಲು ಅರಸನ ದಂಡಾಳುಗಳಿಗೆ ಸಾಧ್ಯವಾಗದೆ ಇದ್ದಾಗ ಬೊಮ್ಮಗೊಂಡ ತನ್ನಲ್ಲಿರುವ ಒಂದು ವಂಕನ ಬಡಗಿಯಿಂದಲೇ ಅದನ್ನು ಹೊರಳಿಸಿದ ಎಂಬ ಘಟನೆ ಈ ಕೆರೆಯ ಮಹತ್ವವನ್ನು ಐತಿಹಾಸಿಕವಾಗಿ ಅನುಲಕ್ಷಿಸಲು ಒತ್ತು ಕೊಡುತ್ತದೆ. ಈ ಘಟನೆ ಕುರಿತಂತೆ ಜನಪದರ ಹಾಡೊಂದು ಸೊಗಸಾಗಿ ಮೂಡಿ ಬಂದಿದೆ.

''ಭೆಳ್ಳನ ಬಿಳಿ ಬಂಡಿ ಥೆಳ್ಳನ ತಿಳಿ ನೀರು
ಭಂಡಿ ಹೊಳಸಿರಿ ನೀರ ಮುಗಿಯಿರಿ



---

**ಅಡಿ ಟಿಪ್ಪಣಿ :**

೧. 'ಬೊಮ್ಮಗೊಂಡೇಶ್ವರರ ಪವಾಡಗಳು' ಧ್ವನಿಸುರಳಿಯಲ್ಲಿನ ಜನಪದ ಹಾಡುಗಳ ಸಾಲುಗಳು

೨. 'ಸ್ಥಳೀಯ ಚರಿತ್ರೆ : ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ', ಸಂ. ಪ್ರೊ. ಲಕ್ಷ್ಮಣ ತೆಲಗಾವಿ, ಪು.೬೪.

ಬಾರಾ ಸಾವಿರ ವೀರದಂಡು ಅವರು ಭಂಡಿ ಹೊಳಸಲ್ಲರು

ಅವರು ನೀರ ಮುಗಿವಲ್ಲರು (ಕುಡಿವಲ್ಲರು)

ಅವರ ಕೈದೊಳಗ ಒಂದು

ವಂಕನ ಬಡೀಗಿತ್ತೋ

ಬಂಡಿ ಹೊಳಸ್ಯಾರ ರಾಜರಿಗಿ

ನೀರ ಮುಗಸ್ಯಾರ (ಕುಡಸ್ಯಾರ)

ದಾನ ಕುಡಲಿಯೆನೋ ನಿನಗೆ ದಿರವೆ ಕುಡಲಿಯೆನೋ

ಜಾಗೀರ ಕೂಡಲಿಯೆನೋ ನಿನಗ ಬೊಮ್ಮಗೊಂಡೇಶ್ವರ''[೪]

ಹೀಗೆ ಬೊಮ್ಮಗೊಂಡ ಬಂಡಿವೊಂದನ್ನು ಎತ್ತಿ ನೀರು ಕುಡಿಸಿದ ಘಟನೆ ಬೀದರ ತುಂಬ ಕಂಡು ಬರುವ ಪ್ರಚಲಿತ ಐತಿಹ್ಯ, ಕೆರೆ ಸುತ್ತ ಹಣಿದುಕೊಂಡ ಘಟನೆ ಕೆರೆಯ ಮಹತ್ವವನ್ನು ಹೆಚ್ಚಿಸಿದೆ ಎನ್ನಬಹುದು. ''ಒಬ್ಬ ವ್ಯಕ್ತಿ ದೈವೀ ಶಕ್ತಿಯಿಂದ ಯಾರೂ ಮಾಡದ ಕಾರ್ಯವನ್ನು ಮಾಡಿ ತೋರಿಸಿದಾಗ ಜನ ಆತನಲ್ಲಿ ಭಯ, ಭಕ್ತಿ ನಿಷ್ಠೆ ತಾಳುತ್ತಾರೆ. ಅತಿಶಯೋಕ್ತಿ ಕಥೆಗಳನ್ನು ಆತನ ಹೆಸರಿನಲ್ಲಿ ಕಟ್ಟಿ ಐತಿಹ್ಯ ಸೃಷ್ಟಿಸುತ್ತಾರೆ. ಅದರಂತೆ ಒಂದು ಸ್ಥಳದಲ್ಲಿ ಒಂದು ವಿಶೇಷತೆ ಜರುಗಿ, ಜನ ನಂಬಿ ಅದೊಂದು ಪವಿತ್ರ ಸ್ಥಳವನ್ನಾಗಿಸುತ್ತಾರೆ. ಆ ಹೆಸರಿನಲ್ಲಿ ಅನೇಕ ಐತಿಹ್ಯಗಳನ್ನು ರಚಿಸುತ್ತಾರೆ.'[೫] ಆದ್ದರಿಂದಲೇ ಹಿಂದೂ ಪರಂಪರೆಯಲ್ಲಿ ಕೆರೆಗಳ ಹುಟ್ಟಿಗೆ ಒಂದೊಂದು ಪೌರಾಣಿಕ ಕಥೆ ಇದ್ದುದ್ದು ಗಮನಿಸಬಹುದು, ಜಲವಿದ್ದಲ್ಲಿ ಜೀವವಿದೆ. ಅದಕ್ಕಾಗಿ ಜಲಕ್ಕೆ ಮಹತ್ವವಿದೆ. ಜನಪದರು ತಮ್ಮ ಸುತ್ತಲಿರುವ ಜಲಸಂಪತ್ತಿನ ಕುರಿತಂತೆ ದೈವೀಭಾವನೆ ತಾಳಿ ಅನೇಕ ರೂಢಿಗಳಿಗೆ ಕಾರಣರಾಗುತ್ತಾರೆ.

ಈ ಕೆರೆಯಿಂದ ಒಂದೆರಡು ಕಿಲೋಮೀಟರ ದೂರದಲ್ಲಿ ಬೊಮ್ಮಗೊಂಡನ ಹೆಸರಿನ ಗುಡ್ಡವೊಂದಿದೆ. ಈ ಗುಡ್ಡ ಔರಾದಕ್ಕೆ ಹೋಗುವ ಮಾರ್ಗ (ನಾವದಗೇರಿ) ದಲ್ಲಿ ಇದೆ. ಇದು ಎತ್ತರವಾಗಿದ್ದು ದೂರದಿಂದ ಸುಂದರವಾಗಿಯೂ ಕಾಣಿಸುತ್ತದೆ. ಈ ಗುಡ್ಡದ ಮೇಲೆ ಬೊಮ್ಮಗೊಂಡೇಶ್ವರನ ಮೂರ್ತಿ ಸ್ಥಾಪಿಸಿ ದೇವಸ್ಥಾನ ನಿರ್ಮಿಸುತ್ತಿದ್ದಾರೆ. ಇನ್ನೂ ಇದು ಪ್ರಗತಿಯಲ್ಲಿದೆ. ಬರಗಾಲದ ಸಂದರ್ಭದಲ್ಲಿ ಗೊಂಡರೆಲ್ಲರೂ ಸೇರಿ ಬೊಮ್ಮಗೊಂಡನಿಗೆ ಮೊರೆ ಇಟ್ಟಾಗ ಅವನು ಒಂದೇ ಕಾಲಿನ ಮೇಲೆ ಈ ಗುಡ್ಡದ ಮೇಲೆ ನಿಂತು ಡೊಳ್ಳು ಭಾರಿಸಿ ಮಳೆಯನ್ನು ತರಿಸುತ್ತಿದ್ದ ಎಂಬುದೊಂದು ಪವಾಡವಿದೆ. ಆ ಕುರಿತು ಹಾಡೊಂದರ ಕೆಲವು ಸಾಲು ಹೀಗಿವೆ -

''ಗೊಂಡ ಕುಲದಲ್ಲಿ ಅವತರಿಸಿ ಗೊಂಡ ಜನಾಂಗ ಉದ್ಧರಿಸಿ

ಗುಡ್ಡದ ಮ್ಯಾಲನಿಂತ ಅಬ್ಬರಿಸಿ

ಡೊಳ್ಳನು ಭಾರಿಸಿ ಹೊಳೆ ಹರಿಸಿ

---

**ಅಡಿ ಟಿಪ್ಪಣಿ :**

೪. ದ್ರೌಪದಿ ಶಂಕರ ಡೊಮನೆ (೪೦)

೫. 'ಜಾನಪದ ಚಿಂತನ' ಡಾ|| ಬಸವರಾಜ ಪೊಲೀಸ್ ಪಾಟೀಲ್, ಪು.೧೯೯.

ಸಂತಸ ತಂದವನ ನಾವು ನಿತ್ಯವು ನೆನೆಯೋಣ

ಬೊಮ್ಮಗೊಂಡನ ನಾಮ ನೆನೆದರೆ ಬಾಳು ಬಂಗಾರ

ನಮ್ಮ ಬಾಳು ಬಂಗಾರ'[೧]

ಕಾಲಾಂತರದಲ್ಲಿ ನಡೆದ ಘಟನೆಯನ್ನು ಪ್ರಕೃತಿಯ ಯಾವುದೋ ಸ್ಥಳಕ್ಕೆ ಅನ್ವಯಿಸಿ ಹೇಳುವ ಕಥೆಗಳು ಸಾಕಷ್ಟು ಸಿಗುತ್ತವೆ. ಆದರಿಂದ ಅಂಥ ಸ್ಥಳಗಳಿಗೆ ಐತಿಹಾಸಿಕ ಮಹತ್ವ ದೊರೆಯುವುದುಂಟು. ಹೀಗೆ ''ನದಿ, ಸಮುದ್ರ, ಸರೋವರಗಳಿಗೆ ಬೆಟ್ಟ ಗುಡ್ಡಗಳಿಗೆ, ಹೊಲ ಬಯಲುಗಳಿಗೆ ಆರೋಪಿಸಿ ಹೇಳುವ ಕಥೆಗಳು ಬಹಳ ಕಾಲ ಉಳಿಯುತ್ತವೆ. ಇವುಗಳು ಸ್ಥಿರ ಐತಿಹ್ಯಗಳೆಂದು ಹೇಳಬಹುದು. ಕಾಲದ ದವಡೆಯಲ್ಲಿ ಸಹಸ್ರಾರು ಐತಿಹ್ಯಗಳು ಹುಟ್ಟಬಹುದು, ಕಣ್ಮರೆಯಾಗಬಹುದು ಆದರೆ ಕೆಲವು ಪ್ರಸಿದ್ಧ ಆಶಯಗಳು ಮಾತ್ರ ಒಂದಲ್ಲೊಂದು ಎಡೆಯಲ್ಲಿ ಮತ್ತೆ ತಲೆಯೆತ್ತಿಕೊಳ್ಳುತ್ತವೆ. ಅವಕ್ಕೆ ಪ್ರಕೃತಿ ಒಂದು ನಿಮಿತ್ತ ಮಾತ್ರ. ಕೆಲವು ಐತಿಹ್ಯಗಳು ಕೆಲವು ಗೊತ್ತಾದ ಪ್ರದೇಶಗಳಿಗೆ ಮಾತ್ರ ಆರೋಪಿಸಲ್ಪಡುತ್ತವೆ. ಅವುಗಳ ವ್ಯಾಪ್ತಿ ಬಹಳ ಕಡಿಮೆ.'[2] ಬೊಮ್ಮಗೊಂಡೇಶ್ವರನ ಗುಡ್ಡ ಎಂದು ಕರೆಯುವ ಈ ಗುಡ್ಡದಲ್ಲಿ ಯಾವುದೇ ವಿಶೇಷತೆ ಏನೂ ಕಂಡು ಬರುವುದಿಲ್ಲ. ಈ ಗುಡ್ಡದ ಮೇಲೆ ಇತ್ತೀಚಿಗೆ ದೇವಸ್ಥಾನ ಕಟ್ಟಿದರೂ ಕೂಡ ಇಲ್ಲಿ ಯಾವುದೇ ಉತ್ಸವ, ಜಾತ್ರೆ, ನಡೆಯುವುದಿಲ್ಲ. ಈ ಗುಡ್ಡ ಯಾವುದೇ ಐತಿಹಾಸಿಕ ಮಹತ್ವ ಪಡೆದಂತೆ ತೋರುವುದಿಲ್ಲ.

**ಬೊಮ್ಮಗೊಂಡೇಶ್ವರನ ದೇವಾಲಯಗಳು :**

ಬೀದರ ಜಿಲ್ಲೆಯ ತುಂಬ ಅನೇಕ ದೇವಾಲಯಗಳು, ಪೂಜಾ ಮಂದಿರಗಳು ಕಾಲಾಂತರದಲ್ಲಿ ನಿರ್ಮಾಣಗೊಂಡಿದ್ದು ನೋಡಬಹುದಾಗಿದೆ. ಲೆಕ್ಕಿಲ್ಲದಷ್ಟು ಮಹಾತ್ಮರು, ಶರಣರು ಇಲ್ಲಿ ಆಗಿ ಹೋಗಿದ್ದಾರೆ. ಇವರ ಒಂದು ಕುರುಹುಗಾಗಿ ಈ ನೆಲದಲ್ಲಿ ಅನೇಕ ದೇವಾಲಯಗಳು, ಚರ್ಚು-ಮಸೀದಿಗಳು ಕಾಣಸಿಗುತ್ತವೆ. ಪಾಪನಾಶ ದೇವಾಲಯ, ಗುರುನಾನಕ ಝಿರಾ (ಗುರುದ್ವಾರಾ), ನರಸಿಂಹ ಝುರಣಿ, ಮೈಲಾರ ಮಲ್ಲಣ್ಣ ದೇವಾಲಯ, ಶನಿಮಹಾತ್ಮ ದೇವಾಲಯ, ಅನಂತಶಯನ ಮಂದಿರ, ರಾಮ ಮಂದಿರ, ರಾಘವೇಂದ್ರ ಮಂದಿರ, ಮೆಥೊಡಿಸ್ಟ್ ಚರ್ಚ್, ಮುಲ್ತಾನ್‌ಬಾಷಾ ದರ್ಗಾ, ಜಾಮಾ ಮಸೀದಿ ಮುಂತಾದವುಗಳು ಬೀದರನಲ್ಲಿ; ಜಲ ಸಂಗವಿ ಶಿವ ದೇವಾಲಯ, ವೀರಭದ್ರೇಶ್ವರ ಮಂದಿರ, ಮಾಣಿಕಪ್ರಭು ಮಂದಿರ ಮುಂತಾದವುಗಳು ಹುಮನಾಬಾದನಲ್ಲಿ ; ಭಾಲ್ಕೇಶ್ವರ ದೇವಾಲಯ, ಚನ್ನಬಸವ ಪಟ್ಟದ್ದೇವರ ಹಿರೇಮಠ ಸಂಸ್ಥಾನ ಭಾಲ್ಕಿಯಲ್ಲಿ; ಬಸವೇಶ್ವರ ದೇವಾಲಯ, ಮೊರಖಂಡಿಯ ಸಿದ್ದೇಶ್ವರ ದೇವಾಲಯ ಮೊದಲಾದವು ಬಸವಕಲ್ಯಾಣದಲ್ಲಿ , ಹೀಗೆ ಅನೇಕ ದೇವಾಲಯಗಳನ್ನು ಬೀದರ ತುಂಬ ನೋಡಲು ಸಿಗುತ್ತವೆ.

ಬೊಮ್ಮಗೊಂಡೇಶ್ವರನ ದೇವಾಲಯಗಳು ಇತ್ತೀಚಿನ ದಶಕಗಳಲ್ಲಿ ಅಂದರೆ ೭೦ರ ದಶಕದ ಈಚೆಗೆ ಕೆಲವು ಕಡೆ ನಿರ್ಮಾಣಗೊಂಡಿವೆ. ಈ ದೇವಾಲಯಗಳಲ್ಲಿ ಬೊಮ್ಮಗೊಂಡೇಶ್ವರನ

---

**ಅಡಿ ಟಿಪ್ಪಣಿ :**

೧. 'ಬೊಮ್ಮಗೊಂಡೇಶ್ವರರ ಪವಾಡಗಳು' ಧ್ವನಿಸುರಳಿಯಲ್ಲಿನ ಜನಪದ ಹಾಡುಗಳ ಸಾಲುಗಳು

೨. 'ಜೀ.ಶಂ.ರವರ ಜಾನಪದ ಬರಹಗಳು' ಸಂ. : ಪ್ರೊ. ಕಾಳೇಗೌಡ ನಾಗವಾರ, ಡಾ।। ಅಂಬಳಿಕೆ ಹಿರಿಯಣ್ಣ

ಮೂರ್ತಿಯನ್ನು ಪ್ರತಿಷ್ಠಾಪಿಸಿ ಆ ಮೂಲಕ ಪೂಜೆ, ಉತ್ಸವ, ಮೆರವಣಿಗೆ, ಜಾತ್ರೆ ಮುಂತಾದವುಗಳನ್ನು ಗೊಂಡ ಬುಡಕಟ್ಟಿನವರು ಹಾಗೂ ಇತರ ವರ್ಗದ ಜನರೂ ಮಾಡುತ್ತಿದ್ದಾರೆ. ಔರಾದ ತಾಲೂಕಿನ ಕೌಠಾ (ಬಿ) ಗ್ರಾಮದಲ್ಲಿ, ಬೀದರ ತಾಲೂಕಿನ ಅಷ್ಟೂರ, ಬರೀದಾಬಾದ, ನಾವದಗೇರಿ ಗ್ರಾಮಗಳಲ್ಲಿ ಹೀಗೆ ಮುಂತಾದವುಗಳ ಕಡೆ ಬೊಮ್ಮಗೊಂಡೇಶ್ವರರ ದೇವಾಲಯಗಳನ್ನು ನೋಡಬಹುದಾಗಿದೆ.

**ಕೌಠಾ (ಬಿ) ಗ್ರಾಮದಲ್ಲಿ ಬೊಮ್ಮಗೊಂಡನ ದೇವಾಲಯ :**

ಬೀದರ ಜಿಲ್ಲೆಯ ಔರಾದ ತಾಲೂಕಿನ ಕೌಠಾ(ಬಿ) ಗ್ರಾಮದಲ್ಲಿ ಬೊಮ್ಮಗೊಂಡೇಶ್ವರನ ಒಂದು ದೇವಾಲಯವಿದೆ. ಇದನ್ನು ೧೯೯೧ರಲ್ಲಿ ಕಟ್ಟಲಾಗಿದೆ. ಒಳಗಡೆ ಬೊಮ್ಮಗೊಂಡೇಶ್ವರನ ಮೂರ್ತಿ ಸ್ಥಾಪಿಸಲಾಗಿದೆ. ಇದಕ್ಕಿಂತ ಮುಂಚೆ ಕೇವಲ ಒಂದು ಕಟ್ಟೆಯನ್ನು ಕಟ್ಟಿ ಅದರ ಮೇಲೆ ಕಲ್ಲನ್ನಿಟ್ಟು ಪೂಜೆ ಮಾಡಲಾಗುತ್ತಿತ್ತು. ಪ್ರತಿ ರವಿವಾರ ಊರ ಜನರು ಪೂಜೆ ಮಾಡಲು ಬರುತ್ತಾರೆ. ಇಲ್ಲಿ ವಾರ ವಾರಕ್ಕೆ ಅಂದರೆ ಪ್ರತಿ ರವಿವಾರ ಸಂಜೆ ವೇಳೆಯಲ್ಲಿ ಭಜನೆಯನ್ನು ಮಾಡಲಾಗುತ್ತದೆ. ಭಜನೆಯಲ್ಲಿ ದೇವರ ನಾಮಸ್ಮರಣೆ, ಹಾಡು, ವಚನಗಳನ್ನು ಹಾಡಲಾಗುತ್ತದೆ. ಇಷ್ಟೇ ಅಲ್ಲದೇ ಈ ಊರಲ್ಲಿ ಬೊಮ್ಮಗೊಂಡೇಶ್ವರನ ಭಕ್ತನಾದ ಮಲ್ಲಗೊಂಡ ಕಾರೆಮುಂಗಿ ಎಂಬ ವ್ಯಕ್ತಿ ಬೊಮ್ಮಗೊಂಡನ ಹೆಸರಿನ ಮೇಲೆ ನೋಡುವವರಿದ್ದಾರೆ. ಇವರು ತೊಂದರೆಗೆ ಒಳಗಾದವರಿಗೆ, ದೆವ್ವ-ಭೂತ ಹಿಡಿದವರಿಗೆ, ಮಕ್ಕಳಾಗದವರಿಗೆ, ರೋಗ ಪೀಡಿತರಿಗೆ ಪರಿಹಾರವನ್ನು ಒದಗಿಸುತ್ತಾರೆ. ಇವರಲ್ಲಿ ದೂರ ದೂರದ ಊರುಗಳಿಂದ ಜನರು ತಮ್ಮ ಸಮಸ್ಯೆಯನ್ನು ಪರಿಹರಿಸಿಕೊಳ್ಳಲು ನಂಬಿಕೆಯನ್ನಿಟ್ಟು ಬರುತ್ತಾರೆ.

ಬೊಮ್ಮಗೊಂಡನ ಈ ದೇವಾಲಯ ಸಾಕಷ್ಟು ದೊಡ್ಡದೂ ಆಗಿರದೇ ಹಾಗೂ ಸಾಕಷ್ಟು ಚಿಕ್ಕದೂ ಆಗಿರದೇ ಮಾಮೂಲಾಗಿದೆ. ಪಕ್ಕದಲ್ಲಿ ಬಂದವರಿಗಾಗಿ ಬಿಸಿಲಿನಿಂದ, ಮಳೆಯಿಂದ ಆಶ್ರಯ ಪಡೆಯಲು ಕೊಠಡಿ ಕಟ್ಟಿಸಲಾಗಿದೆ. ದೇವಾಲಯದ ಎದುರಿನಲ್ಲಿ ಏಳು ಹೆಡೆಯ ನಾಗರ ಹಾವಿನ ಚಿತ್ರವನ್ನು ಕೆತ್ತಲಾದ ಶಿಲೆಯೊಂದು ನೆಡಲಾಗಿದೆ. ಬೀದರದಿಂದ ಔರಾದಕ್ಕೆ ಹೋಗುವಾಗ ರಸ್ತೆಗೆ ಹತ್ತಿಕೊಂಡಂತಿರುವ ಈ ದೇವಾಲಯವನ್ನು ಬಸ್ಸಿನಿಂದಲೇ ನೋಡಬಹುದಾಗಿದೆ.

**ಜಾತ್ರೆ :**

ಕೌಠಾ (ಬಿ) ಗ್ರಾಮದಲ್ಲಿನ ಬೊಮ್ಮಗೊಂಡೇಶ್ವರನ ದೇವಾಲಯದಲ್ಲಿ ಜಾತ್ರೆ ಕೂಡ ಇಲ್ಲಿಯ ಜನ ಮಾಡುತ್ತಾರೆ. ಪ್ರತಿ ವರ್ಷ ದೀಪಾವಳಿ ನಂತರ ಬರುವ ಛಟ್ಟಿಯ ದಿನದಂದು ಜಾತ್ರೆ ಜರುಗುತ್ತದೆ. ಈ ಜಾತ್ರೆಯಲ್ಲಿ ಸುತ್ತ-ಮುತ್ತಲಿನ ಊರಿನ ಜನ ಬಂದು ಸೇರುತ್ತಾರೆ. ಮೂರು ದಿವಸ ಜಾತ್ರೆಯನ್ನು ವಿಜ್ರಂಭಣೆಯಿಂದ ನಡೆಸಲಾಗುತ್ತದೆ. ದೀಪಾವಳಿಯ ನಂತರ ಬರುವ ಅಮವಾಸೆಯಿಂದ ದೇವಾಲಯದಲ್ಲಿ ಸಪ್ತಾಹ ವ್ರತ ಕೂಡ ಜನರು ಭಕ್ತಿಯಿಂದ ಮಾಡುತ್ತಾರೆ.

'ಸಪ್ತಾ' ಎಂದರೆ ಇಡೀ ಏಳು ದಿನಗಳ ಹಗಲು-ರಾತ್ರಿ ದೇವರ ನಾಮಸ್ಮರಣೆ ಮಾಡುವುದು. ಇಲ್ಲಿ ಈ ವ್ರತವನ್ನು ಜನರು ಸ್ವ-ಇಚ್ಛೆಯಿಂದ ಮಾಡುವರು. ಸಪ್ತಾ ಪ್ರಾರಂಭವಾದ ದಿನದಿಂದ ದೇವಾಲಯದ ಎದುರುಗಡೆ ಅಗ್ನಿ ಕುಂಡವನ್ನು ಸ್ಥಾಪಿಸುತ್ತಾರೆ. ಜಾತ್ರೆ ಮುಗಿಯುವವರೆಗೆ ಈ ಅಗ್ನಿ ಕುಂಡದಲ್ಲಿ ಅಗ್ನಿ ಆರಗೊಡವುದಿಲ್ಲ ಅದು ಉರಿಯುತ್ತಲೇ ಇರುತ್ತದೆ. ಈ ಏಳು ದಿನದ

(ಅಮವಾಸೆಯಿಂದ ಜಾತ್ರೆ ಮುಗಿಯುವವರೆಗೆ) ಅವಧಿಯಲ್ಲಿ ದೇವರು ಗುಡಿಯಲ್ಲೇ ನೆಲೆಗೊಂಡಿರುತ್ತಾನೆ ಎಂದು ಜನರು ನಂಬುತ್ತಾರೆ. ದೆವ್ವ-ಭೂತ ಅನಿಷ್ಟ ಮುಂತಾದವುಗಳು ದೇವಾಲಯದ ದೂರದಲ್ಲಿ ಕೂಡ ಸುಳಿಯುವುದಿಲ್ಲ ಎನ್ನುತ್ತಾರೆ.

ಬೊಮ್ಮಗೊಂಡೇಶ್ವರನ ಜಾತ್ರೆಯಲ್ಲಿ ಗೊಂಡರಷ್ಟೇ ಅಲ್ಲದೇ ಇಡೀ ವಾರ ಊರ ಜನರೆಲ್ಲಾ ಜಾತಿ-ಭೇದವ ಮರೆತು ವಿವಿಧ ಜಾತಿಯ ಜನರೆಲ್ಲಾ ಒಂದುಗೂಡಿ ಸಂತಸದಿಂದ ಭಾಗಿಯಾಗುತ್ತಾರೆ. ''ಯಾವುದೇ ಊರಿನಲ್ಲಿ ಜರುಗುವ ಜಾತ್ರೆಗಳು ಉತ್ಸವಗಳು ವಿಶಿಷ್ಟವಾಗಿರುತ್ತವೆ. ಊರವರು, ನೆರೆ ಊರಿನವರು, ಬಂಧು ಬಳಗದವರೆಲ್ಲಾ ಜಾತ್ರೆಯ ಉತ್ಸವದಲ್ಲಿ ಸಾಮೂಹಿಕವಾಗಿ ಸೇರುವರು. ಊರಿನ ಕೆಲ ಕಾರ್ಯಕರ್ತರು ಜಾತ್ರೆಗಾಗಿ ಊರಲ್ಲಿ ಚಂದಾ ಪಟ್ಟಿ ಮಾಡುವುದು, ಆಯ-ವ್ಯಯ ಲೆಕ್ಕ ಇಡುವುದು, ಅನ್ನ ಸಂತರ್ಪಣೆ ಏರ್ಪಡಿಸುವುದು, ಜಾತ್ರೆಯ ಮೆರವಣಿಗೆ ಸಿದ್ಧಪಡಿಸುವುದು ಹೀಗೆ ಅವುಗಳನ್ನು ಧರ್ಮಾರ್ಥ ಕಾರ್ಯಗಳೆಂದು ಭಾವಿಸಿ ಕೆಲಸ ಮಾಡುವರು.'[೮] ಈ ದೃಶ್ಯ ಯಾವುದೇ ಜಾತ್ರೆಯಲ್ಲಿ ಸರ್ವಸಾಮಾನ್ಯವಾಗಿ ಕಂಡು ಬರುವಂಥದ್ದಾಗಿದೆ. ಬೊಮ್ಮಗೊಂಡೇಶ್ವರ ಜಾತ್ರೆ-ಉತ್ಸವ-ಪೂಜೆ ಮುಂತಾದವುಗಳು ಕೂಡ ವಿಶಿಷ್ಟವಾಗಿ ನೆರವೇರಿಸುತ್ತಾರೆ.

''ಭಾರತ ಹುಣ್ಣಿಮೆ ಬರಲು ಸಂತಸ ಎಲ್ಲರಿಗೆ
ಬಂಡಿ ಕಟ್ಟುತ್ತ ಬರುವರು ಬೊಮ್ಮಗೊಂಡನ ಜಾತ್ರೆಗೆ
ಸುಳಿವ ಗಾಳಿಯಲ್ಲಿ ಇವನ ಶಕ್ತಿ ಕಂಡೆ
ನಡೆವ ಜಾತ್ರೆಯಲ್ಲೂ ಇವನ ಕುರಿಯ ಕಂಡೆ
ಭರತ ಹುಣ್ಣಿಮೆಯ ಭಾಗ್ಯದ ಸಿರಿ ನಿಧಿಯ
ಕೋಟಿ ತೇಜಮಯನ ಕಂಡು ಬಂದೆನವ್ವಾ'[೯]

ಜಾತ್ರೆಯ ಮೂರನೇಯ ದಿನದಂದು (ಕೊನೆಯ ದಿನ) ಬೊಮ್ಮಗೊಂಡೇಶ್ವರನ ಭಾವಚಿತ್ರವನ್ನು ಶ್ರೀಗಂಧದ ಪಲ್ಲಕ್ಕಿಯಲ್ಲಿ ಇಟ್ಟು ಊರಿನ ಪ್ರಮುಖ ಬೀದಿಗಳಲ್ಲಿ ಮೆರೆಸುತ್ತಾರೆ. ಈ ಜಾತ್ರೆಯಲ್ಲಿ ಹರಕೆ ಹೊತ್ತಂತಹ ಭಕ್ತ ಜನರು ತಮ್ಮ ಹರಕೆಯನ್ನು ಪೂರೈಸುತ್ತಾರೆ. ಕೆಲವರು ತಮ್ಮ ಮಕ್ಕಳಿಗೆ ಜಾವುಳವನ್ನು ತೆಗೆಸಿದರೆ, ಕೆಲವರು ಶಾಲು-ಕಿರುಗುಣಿಯನ್ನು ಉಡಿಸುತ್ತಾರೆ.

ಹೀಗೆ ಬೊಮ್ಮಗೊಂಡೇಶ್ವರ ಜಾತ್ರೆಯನ್ನು ಊರವರೆಲ್ಲ ಸೇರಿ ಮಾಡುತ್ತಾರೆ. ಇಂತಹ ''ಜಾತ್ರೆಗಳು ಪೌರಾಣಿಕ, ಐತಿಹಾಸಿಕ ಮಹಾಪುರುಷರ ಪ್ರತೀಕವಾಗಿಯೂ ನಡೆಯಬಹುದು. ಸಾಮಾನ್ಯ ವ್ಯಕ್ತಿ ತನ್ನ ಜೀವನದಲ್ಲಿ ಒಳ್ಳೆಯ ಆದರ್ಶ ಪಾಲಿಸಿ ಬದುಕಿ ತೀರಿಹೋದಾಗ ಆತನನ್ನು ದೇವರೆಂದೇ ಭಾವಿಸುವರು. ಅವನ ಹೆಸರಿನಲ್ಲೂ ಜಾತ್ರೆ ಏರ್ಪಡಿಸುವರು. ಅವರವರ ಪ್ರಭಾವ ಮಹತ್ವಿಕೆಯ ಮೇಲಿಂದ ಜಾತ್ರೆಗಳು ಕೇವಲ ಒಂದು ಪ್ರದೇಶಕ್ಕೆ ಸೀಮಿತವಾಗಿದ್ದರೆ ಇನ್ನೂ ಕೆಲವು ತನ್ನ ಗಡಿ ದಾಟಿ ಹೊರ ರಾಜ್ಯದವರೆಗೂ ವ್ಯಾಪಿಸಿರುತ್ತವೆ.''[೧೦] ಬೊಮ್ಮಗೊಂಡೇಶ್ವರನನ್ನು ಗೊಂಡ

---

**ಅಡಿ ಟಿಪ್ಪಣಿ :**

೮. 'ಜಾನಪದ ಸಾಹಿತ್ಯ ದರ್ಶನ' ಸಂ. : ಎಸ್.ವೃಷಭೇಂದ್ರ ಸ್ವಾಮಿ, ಪು. ೪೪.

೯. 'ಬೊಮ್ಮಗೊಂಡೇಶ್ವರರ ಪವಾಡಗಳು' ಧ್ವನಿಸುರಳಿಯಲ್ಲಿನ ಜನಪದ ಹಾಡಿನ ಸಾಲುಗಳು

೧೦. 'ಜಾನಪದ ಸಾಹಿತ್ಯ ದರ್ಶನ' ಸಂ. : ಎಸ್.ವೃಷಭೇಂದ್ರ ಸ್ವಾಮಿ, ಪು. ೪೪.

ಬುಡಕಟ್ಟಿನ ಹಾಗೂ ಇತರ ವರ್ಗದ ಜನಪದರು ಜಾತ್ರೆ, ಉತ್ಸವಗಳಲ್ಲಿ ಮೆರೆಸಿ ಸಂತೋಷ ಪಡುತ್ತಾರೆ. ಆತನನ್ನು ಒಬ್ಬ ಸಾಂಸ್ಕೃತಿಕ ವೀರನಾಗಿ ಕಾಣುತ್ತಾರೆ.

**ಅಷ್ಟೂರು ಗ್ರಾಮದ ದೇವಾಲಯ :**

ಬೀದರ ಜಿಲ್ಲೆಯ ಅಷ್ಟೂರ ಗ್ರಾಮದಲ್ಲಿಯೂ ಬೊಮ್ಮಗೊಂಡೇಶ್ವರ ದೇವಾಲಯವಿದೆ. ಇಲ್ಲಿ ಪ್ರತಿ ರವಿವಾರವಂದು ಭಜನೆಯನ್ನು ಮಾಡುತ್ತಾರೆ. ಭಜನೆಯಲ್ಲಿ ಬೊಮ್ಮಗೊಂಡೇಶ್ವರನ ಕುರಿತ ಹಾಡುಗಳನ್ನು ಹಾಡುತ್ತಾರೆ. ನೋಡಲು ಚಿಕ್ಕದಾದ ದೇವಸ್ಥಾನವಿದ್ದರೂ ಹೊರಗೆ ಪ್ರಾಂಗಣದಲ್ಲಿ ಕುಳಿತು ಭಜನೆ ಮಾಡುತ್ತಾರೆ. ಪ್ರತಿ ಶ್ರಾವಣ ಮಾಸದಲ್ಲಿ ಒಂದು ತಿಂಗಳು ರಾತ್ರಿ ವೇಳೆಯಲ್ಲಿ ಭಜನೆ ಮಾಡುತ್ತಾರೆ. ಸುತ್ತ ಮುತ್ತಲಿನ ಊರಿನವರು ಬಂದು ಅನ್ನದಸೋಹದಲ್ಲಿ ಭಾಗಿಯಾಗಿ ಪ್ರಸಾದ ತೆಗೆದುಕೊಂಡು ಹೋಗುತ್ತಾರೆ. ಬೀದರದಿಂದಲೂ ಅನೇಕ ಗೊಂಡ ಬುಡಕಟ್ಟಿನ ಪ್ರತಿಷ್ಠಿತ ವ್ಯಕ್ತಿಗಳು ಪ್ರಸಾದ ಸ್ವೀಕರಿಸಲು ಹೋಗುತ್ತಾರೆ. ಬೊಮ್ಮಗೊಂಡನ ಅಭಿಮಾನಿಗಳು ಈ ಊರಿನಲ್ಲಿ ಸಾಕಷ್ಟು ಜನ ಇದ್ದಾರೆ. ಬೊಮ್ಮಗೊಂಡೇಶ್ವರನು ನೀರು ಕುಡಿಸಿದ ಬಹಮನಿ ಅರಸ ಅಹಮದಷಾನ ಕಾಲದ ಅಲ್ಲಮಪ್ರಭು ಗುಮ್ಮಟದಂತಹ ಅನೇಕ ಸ್ಮಾರಕಗಳು ಈ ಊರಿನಲ್ಲಿ ನೋಡಬಹುದು.

**ಬರೀದಾಬಾದ ದೇವಾಲಯ :**

ಬರೀದಾಬಾದಲ್ಲಿಯೂ ಬೊಮ್ಮಗೊಂಡೇಶ್ವರನ ಸುಂದರ ದೇವಾಲಯವಿದೆ. ಈ ದೇವಾಲಯದ ಮೂರ್ತಿ ತುಂಬಾ ಚಿಕ್ಕದಾಗಿದೆ. ಆದರೆ ಮಂದಿರ ಭವ್ಯವಾಗಿ ಕಟ್ಟಲಾಗಿದೆ. ಗರ್ಭಗುಡಿ, ಹೊರ ಮಂಟಪ ಹಾಗೂ ವಿಶಾಲ ಪ್ರಾಂಗಣವನ್ನು ಹೊಂದಿರುವ ದೇವಾಲಯದ ಮುಂದೆ ಮತ್ತೊಂದು ಮೂರ್ತಿಯನ್ನು ಸ್ಥಾಪಿಸಲಾಗಿದೆ. ಈ ಮೂರ್ತಿಯು ವಿವಿಧ ಹಳ್ಳಿಗಳಲ್ಲಿರುವಂತೆ ಕುರಿ, ನಾಯಿಯೊಂದಿಗೆ, ಬಡಿಗೆ ಹಿಡಿದದ್ದಾಗಿದೆ. ಇಲ್ಲಿಯೂ ಕೂಡ ವರ್ಷಕ್ಕೊಂದು ಸಲ ಅನ್ನ ದಾಸೋಹವನ್ನು ಜನರು ಮಾಡುತ್ತಾರೆ. ಊರನ್ನು ಪ್ರವೇಶ ಮಾಡುವುದಕ್ಕೆ ಮುಂಚೆ ಈ ದೇವಾಲಯವು ಕಾಣಿಸುತ್ತದೆ.

**ಬೀದರನ ದೇವಾಲಯ :**

ಬೀದರನ ಬೊಮ್ಮಗೊಂಡನ ಗುಡ್ಡದ ಮೇಲೆ ಒಂದು ದೇವಾಲಯವಿದೆ. ಈ ದೇವಾಲಯದ ಕಟ್ಟಡ ಇನ್ನೂ ಪೂರ್ತಿಗೊಂಡಿಲ್ಲ. ಬೊಮ್ಮಗೊಂಡೇಶ್ವರನ ಅಭಿಮಾನಿಗಳು ಈ ದೇವಾಲಯ ನಿರ್ಮಿಸಲು ಬಹಳ ಹೋರಾಟ ಮಾಡಿದರು. ಇಲ್ಲಿನ ಮೂರ್ತಿ ಮೊದಲು ಬೊಮ್ಮಗೊಂಡನ ಕೆರೆಯ ಬಳಿ ಸ್ಥಾಪಿಸಬೇಕು ಎಂದುಕೊಂಡಿದ್ದರು. ಆದರೆ ಸರಕಾರ ಇದಕ್ಕೆ ಅನುಮತಿ ಕೊಡಲಿಲ್ಲ. ಕೆರೆ ಬಳಿಯಲ್ಲಿ ಹತ್ತಾರು ವರ್ಷಗಳ ಹಿಂದೆ ಅನ್ನ ಸಂತರ್ಪಣೆ ಮುಂತಾದ ಆಚರಣೆಗಳನ್ನು ಜನರು ಮಾಡುತ್ತಿದ್ದರು. ಆದರೆ ಸರಕಾರ ಅದನ್ನು ಸಂಪೂರ್ಣ ನಿಲ್ಲಿಸಿ ಹಾಕಿತು. ಆದ್ದರಿಂದ ಅಲ್ಲಿ ಪ್ರತಿಷ್ಠಾಪಿಸಬೇಕಾದ ಬೊಮ್ಮಗೊಂಡೇಶ್ವರನ ಮೂರ್ತಿಯನ್ನು ಕೆರೆಯಿಂದ ಎರಡು-ಮೂರು ಕಿ.ಮೀ. ದೂರವಿರುವ ಬೊಮ್ಮಗೊಂಡನ ಗುಡ್ಡದ ಮೇಲೆ ತಂದು ಪ್ರತಿಷ್ಠಾಪಿಸಿದರು. ಆದರೆ ಈ ದೇವಾಲಯ ಭವ್ಯ ಅಡಿಪಾಯವನ್ನೋ ಕಂಡಿತು ಆದರೆ ಪೂರ್ಣಗೊಳ್ಳಲಿಲ್ಲ. ಸದ್ಯದಲ್ಲಿ ನೋಡಿದರೆ

ಇದು ತೀರ ನಿರ್ಲಕ್ಷಕ್ಕೆ ಒಳಗಾದಂತೆ ಕಂಡು ಬರುತ್ತದೆ. ಬೊಮ್ಮಗೊಂಡೇಶ್ವರನು ಇದೇ ಗುಡ್ಡದ ಮೇಲೆ ನಿಂತು ಮಳೆ ತರಿಸುತ್ತಿದ್ದ ಎಂಬುದು ಒಂದು ಪ್ರತೀತಿ ಇದೆ.

ಹೀಗೆ ಬೀದರ ತಾಲೂಕಿನಲ್ಲಿ ಮಾತ್ರ ಬೊಮ್ಮಗೊಂಡೇಶ್ವರನ ಕೆಲವೇ ಕೆಲವು ದೇವಾಲಯಗಳು ಕಂಡು ಬರುತ್ತವೆ. ಅವುಗಳಲ್ಲಿ ಉತ್ಸವ, ಜಾತ್ರೆ, ಅನ್ನಸಂತರ್ಪಣೆ ಮುಂತಾದವುಗಳನ್ನು ಜನರು ಸಂತೋಷದಿಂದ ಏರ್ಪಡಿಸುತ್ತಾರೆ. ಆ ಮೂಲಕ ಧರ್ಮಕಾರ್ಯದಲ್ಲಿ ಭಾಗಿಯಾಗಿ ಪುನಿತರಾದೆವು ಎನ್ನುವ ಭಾವ ಹೊಂದುತ್ತಾರೆ.

**ಬೊಮ್ಮಗೊಂಡೇಶ್ವರನ ಮೂರ್ತಿಗಳು :**

ಇಂದಿನ ಆಧುನಿಕ ಸಮಾಜದಲ್ಲಿ ಹಿಂದೆ ಆಗಿ ಹೋದಂತಹ ಅನೇಕ ಪುರುಷರ ಮೂರ್ತಿಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಸ್ಥಾಪಿಸುತ್ತಿರುವುದು ಸಾಮಾನ್ಯ ಸಂಗತಿ. ಹೀಗೆ ಸ್ಥಾಪಿಸುವುದರ ಮೂಲಕ ಸಮಾಜವನ್ನು ಆ ದಾರಿಯಲ್ಲಿ ನಡೆಸುವ, ವ್ಯಕ್ತಿತ್ವವೊಂದನ್ನು ಸಮಾಜಕ್ಕೆ ಪರಿಚಯಿಸಿ, ಅವರ ವಿಚಾರಗಳನ್ನು ಸಮಾಜಕ್ಕೆ ಮನದಟ್ಟು ಮಾಡುವುದಾಗಿರುತ್ತದೆ. ಇದರಿಂದ ಸಹಜವಾಗಿ ಇಂದು ನಗರಗಳಲ್ಲಿ ಹಳ್ಳಿಗಳಲ್ಲಿ ಅನೇಕ ಮಹಾತ್ಮರ ಮೂರ್ತಿಗಳನ್ನು ನೋಡಲು ಸಿಗುತ್ತದೆ. ಹಿಂದೆ ಆಗಿ ಹೋದಂತಹ ಮಹಾನ್ ಪುರುಷರ ಅಭಿಮಾನಿಗಳು ಇಂಥ ಕೆಲಸಗಳಲ್ಲಿ ಸದಾ ಮುಂದಿರುತ್ತಾರೆ. ತಾವು ಅಭಿಮಾನ ಇಟ್ಟಿರುವ ಮಹಾತ್ಮಿಕರ ಅಥವಾ ವಿಶೇಷವಾಗಿ ಸಮಾಜ ಸುಧಾರಣಾ ಕಾರ್ಯ ಮಾಡಿರುವ ವ್ಯಕ್ತಿಗಳ ಮೂರ್ತಿಗಳನ್ನು ಸ್ಥಾಪಿಸಲಾಗುತ್ತದೆ. ಇದರಿಂದ ಸಮಾಜದಲ್ಲಿ ಬದುಕುತ್ತಿರುವ ವ್ಯಕ್ತಿಗಳಿಗೆ ಅಂಥ ಕಾರ್ಯಗಳನ್ನು ಮಾಡಲು ಹುರಿದುಂಬಿಸುವ ಲಕ್ಷ್ಯ ಹೊಂದಿರುತ್ತಾರೆ.

ಕರ್ನಾಟಕವನ್ನೊಳಗೊಂಡಂತೆ ಬೀದರ ಜಿಲ್ಲೆಯಲ್ಲಿ ಬಸವಣ್ಣ, ಗಾಂಧೀ, ಶಿವಾಜಿ, ಮಾಚಿದೇವ, ಹರಳಯ್ಯ, ಅಂಬೇಡ್ಕರ ಮುಂತಾದವರ ಮಹಾತ್ಮರ ಮೂರ್ತಿಗಳನ್ನು ಹಳ್ಳಿ ಹಳ್ಳಿಗಳಲ್ಲಿ ಸ್ಥಾಪನೆಗೊಂಡಿದ್ದು ಕಂಡು ಬರುತ್ತವೆ. ಅದರಂತೆ ಬೀದರ ಜಿಲ್ಲೆಯಲ್ಲಿ ಬೊಮ್ಮಗೊಂಡೇಶ್ವರ ಮೂರ್ತಿಗಳು ಸ್ಥಾಪನೆಗೊಂಡಿದ್ದು ನೋಡಬಹುದಾಗಿದೆ. ಈ ಮೂರ್ತಿಗಳು ಎಂಬತ್ತರ ದಶಕದ ಈಚೆಯಿಂದ ಇಲ್ಲಿನ ಗೊಂಡರ ಹೋರಾಟದ ಪ್ರತೀಕವೆಂಬಂತೆ ನಿರ್ಮಾಣಗೊಂಡಿವೆ. ಅರವತ್ತರ ದಶಕದ ಮುಂಚೆ ಬೊಮ್ಮಗೊಂಡೇಶ್ವರನ ಮೂರ್ತಿಗಳಾಗಲಿ, ಭಾವಚಿತ್ರಗಳಾಗಲಿ ಇರಲಿಲ್ಲ. ಅಲ್ಪ ಸ್ವಲ್ಪ ಚಿತ್ರಕಲೆ ಗೊತ್ತಿದ್ದ ಬೊಮ್ಮಗೊಂಡೇಶ್ವರನ ಕಟ್ಟಾ ಅಭಿಮಾನಿ ನಾಗಪ್ಪ ಚಿದ್ರಿಯವರು (ಅರವತ್ತರ ದಶಕದ ಸಂದರ್ಭದಲ್ಲಿ) ಬೊಮ್ಮಗೊಂಡೇಶ್ವರ ಚಿತ್ರವನ್ನು ಪ್ರಪ್ರಥಮ ಬಾರಿಗೆ ಇಳಿಸಿ ತೋರಿಸಿದರು. ಜಿಲ್ಲಾ ಸಂಗೊಳ್ಳಿರಾಯಣ್ಣ ಗೊಂಡ ತರುಣ ಸಂಘವು ಇತ್ತೀಚಿಗೆ (೧೯೯೫ರಲ್ಲಿ) ಅಚ್ಚು ಮಾಡಿಸಿ ಬೀದರ ಜಿಲ್ಲೆಯನ್ನೊಳಗೊಂಡಂತೆ ಇಡೀ ಕರ್ನಾಟಕದಲ್ಲಿ ಸಿಗುವಂತೆ ಮಾಡಿತು.

ಬೊಮ್ಮಗೊಂಡೇಶ್ವರ ಮೂರ್ತಿಗಳನ್ನು, ಭಾವಚಿತ್ರಗಳನ್ನು ಊರಿನ ಮುಖ್ಯ ರಸ್ತೆಯಲ್ಲಿ ಚೌಕಗಳನ್ನು ಸ್ಥಾಪಿಸಿ (ಕಟ್ಟೆಯನ್ನು ಕಟ್ಟಿ) ಅದರ ಮೇಲೆ ಮೂರ್ತಿ ಸ್ಥಾಪಿಸಲಾಗುತ್ತದೆ. ಎಲ್ಲೆಲ್ಲಿ ಹೆಚ್ಚು ಗೊಂಡರು ವಾಸಿಸುತ್ತಾರೆ ಅಲ್ಲಲ್ಲಿ ಈ ಮೂರ್ತಿಗಳು ಕಂಡು ಬರುತ್ತವೆ. ಮೂಲತಃ ಈ ಮೂರ್ತಿಗಳು ಗೊಂಡರು ತಮ್ಮ ಸಂಘಟನೆಯನ್ನು ಬಲ ಪಡಿಸುವುದಕ್ಕಾಗಿ ಸ್ಥಾಪಿಸಿಕೊಳ್ಳುತ್ತಿದ್ದಾರೆ. ಇದರ ಫಲವಾಗಿ

ಎಂಬಂತೆ ಗೊಂಡರು ಎಲ್ಲೆಡೆ (ಬೀದರ ಜಿಲ್ಲೆಯಲ್ಲಿ) ಸಂಘಟಿತರಾಗುವುದರ ಮೂಲಕ ಸ್ವಾಭಿಮಾನವನ್ನು ಬೆಳೆಸಿಕೊಂಡಿದ್ದಾರೆ.

ಜಿಲ್ಲಾ ಸಂಗೊಳ್ಳಿ ರಾಯಣ್ಣ ತರುಣ ಗೊಂಡ ಸಂಘವು, ಜಿಲ್ಲಾ ಗೊಂಡ ನೌಕರರ ಸಂಘದ ಸಹಯೋಗದಲ್ಲಿ ಬೀದರನಲ್ಲಿ ಅನೇಕ ಮೂರ್ತಿಗಳನ್ನು ಸ್ಥಾಪಿಸಿದೆ. ಜಿಲ್ಲೆ ತುಂಬ ಕಂಡು ಬರುವ ಬೊಮ್ಮಗೊಂಡೇಶ್ವರರ ಮೂರ್ತಿಗಳು ಸಿಮೆಂಟಿನ ಪಕ್ಕಾ ಮೂರ್ತಿಗಳಾಗಿದ್ದು ಸುಂದರವೂ ಭವ್ಯವೂ ಆಗಿವೆ. ಕೆಲವು ಕಡೆ ತಗಡಿನ ಮೇಲೆ ಬೊಮ್ಮಗೊಂಡೇಶ್ವರನ ಚಿತ್ರ ಬರೆದು ಚೌಕ್‌ಗಳನ್ನು ನಿರ್ಮಿಸಿದ್ದು ಕಂಡು ಬರುತ್ತದೆ. ವಿವಿಧ ಬಣ್ಣಗಳಿಂದ ಕೂಡಿದ ಈ ಮೂರ್ತಿಗಳು ಸುಂದರ ರೂಪ ಪಡೆದಿವೆ. ಈ ಮೂರ್ತಿಗಳ ಸಾಮಾನ್ಯ ರೂಪ ಹೇಗಿದೆಯೆಂದರೆ ಬರಿ ಮೈಯಲ್ಲಿ ಒಂದು ಪಂಚೆ ಉಟ್ಟುಕೊಂಡು, ತಲೆಗೆ ಮುಂಡಾಸು ಕಟ್ಟಿಕೊಂಡು, ಹೆಗಲ ಮೇಲೆ ಕಂಬಳಿ ಹೊದ್ದು, ಕೈಯಲ್ಲಿ ರುದ್ರಾಕ್ಷಿ ಕಟ್ಟಿಕೊಂಡು, ಒಂದು ಕೈಯಲ್ಲಿ ಬಡಿಗೆ ಹಿಡಿದಿರುವುದು ಕಂಡು ಬರುವ ಸಾಮಾನ್ಯ ದೃಶ್ಯ. ಮೂರ್ತಿಯ ಜೊತೆಯಲ್ಲಿ ಕುರಿ, ನಾಯಿ, ಹಾವು, ಮೊಲ ಹೀಗೆ ಕೆಲವು ಪ್ರಾಣಿಗಳು ನಿಂತಿರುವುದು ನೋಡಬಹುದು. ಈತನ ಈ ಒಟ್ಟು ರೂಪವನ್ನು ನೋಡಿದವರಿಗೆ ಇವನೊಬ್ಬ ಅಲೆಮಾರಿ ಎಂಬುದು ಅನ್ನಿಸದೇ ಇರದು.

ಇಲ್ಲಿ ಗೊಂಡರು ಬೊಮ್ಮಗೊಂಡೇಶ್ವರನ ಮೂರ್ತಿಗಳನ್ನು ಪ್ರತಿಷ್ಠಾಪಿಸುವ ಸಲುವಾಗಿ ಹೋರಾಟಗಳನ್ನು ಮಾಡಿದ್ದಾರೆ. ಊರಿನ ಇತರರು ವಿರೋಧ ಅಂದರೆ ಮೂರ್ತಿ ಸ್ಥಾಪಿಸಲು ಅಡ್ಡಿಯುಂಟು ಮಾಡಿದಾಗ ತೀವ್ರ ಹೋರಾಟಕ್ಕಿಳಿದಿದ್ದಾರೆ. ಬೀದರ ಜಿಲ್ಲೆಯ ಅನೇಕ ಹಳ್ಳಿಗಳಲ್ಲಿ ಈತನ ಮೂರ್ತಿ ಪ್ರತಿಷ್ಠಾಪಿಸುವ ಕುರಿತು ಸೆಣಸಾಟ ನಡೆದಿವೆ. ಈ ಸೆಣಸಾಟಗಳಿಂದ ಗೊಂಡರು ಸಂಘಟಿತರಾಗಿದ್ದಾರೆ. ಇದಕ್ಕೆ ಉದಾಹರಣೆಯೆಂಬಂತೆ 'ಕೊನಮೆಳಕುಂದಾ' ಗ್ರಾಮದಲ್ಲಿ ಮೂರ್ತಿ ಪ್ರತಿಷ್ಠಾಪಿಸುವ ಕುರಿತಂತೆ ತಿಂಗಳುಗಟ್ಟಲೆ ಹೋರಾಟ ನಡೆದದ್ದು ಗಮನಿಸಬಹುದು. ಇಂಥ ಹೋರಾಟದ ಮೂಲಕ ಗೊಂಡರಲ್ಲಿ ಬೊಮ್ಮಗೊಂಡೇಶ್ವರನ ಕುರಿತು ಅಭಿಮಾನ, ಕಾಯಕನಿಷ್ಠೆ , ಸರಳಜೀವನ, ಮನುಷ್ಯ, ಪಶುಪಕ್ಷಿ ಮುಂತಾದವುಗಳ ಮೇಲೆ ಕರುಣೆ ಬೆಳಸಬೇಕು ಎನ್ನುವ ಉದ್ದೇಶದಿಂದ ಈತನ ಮೂರ್ತಿಯನ್ನು ಗೊಂಡರು ತಮ್ಮ ಪ್ರತಿನಿಧಿಯಾಗಿ ಸ್ಥಾಪಿಸಬೇಕು ಎಂದು ನಿಶ್ಚಯಿಸಿದರು. ಆದರೆ ಇದಕ್ಕೆ ಇತರ ಜನವರ್ಗದವರು ಕೆಲವು ಸಲ ಆಸ್ಪದ ಕೊಡದೇ ಹೋದಾಗ ತೀವ್ರ ಹೋರಾಟಕ್ಕೆ ಇಳಿದರು. ಇದು ಅವರಿಗೆ ಅನಿವಾರ್ಯವೂ ಆಗಿತ್ತು. ಏಕೆಂದರೆ ಸಮಾಜದಲ್ಲಿ ಎಲ್ಲ ವರ್ಗದವರು ಒಬ್ಬರಿಲ್ಲ ಒಬ್ಬರನ್ನು ನಾಯಕನನ್ನಾಗಿ ಮಾಡಿಕೊಂಡು ಆ ಮೂಲಕ ಸಂಘಟಿತರಾಗಿದ್ದಾರೆ ಆದರೆ ಮೂಲ ಆದಿವಾಸಿಗಳಾದ ಗೊಂಡರಲ್ಲಿ ಸಂಘಟನೆ ಇರಲಿಲ್ಲ. ಒಬ್ಬ ಸೂಕ್ತ ನಾಯಕನನ್ನು ಇವರು ಗುರುತಿಸಿಕೊಂಡಿರಲಿಲ್ಲ. ಇದಕ್ಕೆ ಹಲವಾರು ಕಾರಣಗಳನ್ನು ಕೊಡಬಹುದು. ಮೂಲತ: ಹೆಚ್ಚಾಗಿ ಕುರಿ ಕಾಯುವ ವೃತ್ತಿಯನ್ನು ಮಾಡುವ ಗೊಂಡರು ಬೆಳಗ್ಗೆ ಎದ್ದೊಡನೆ ಕುರಿ ಮೇಯಿಸುಲು ಕೆಲವೊಮ್ಮೆ ಮಡದಿ ಮಕ್ಕಳ ಜೊತೆಗೆ ಅಡವಿಗೆ ಹೊರಡುತ್ತಾರೆ. ಮರಳಿ ಮನೆಗೆ ಬರುವುದು ಸಂಜೆ ಹೊತ್ತಿನಲ್ಲಿಯೇ. ರಾತ್ರಿ ಹೊತ್ತಿನಲ್ಲಿ ಕಳ್ಳಕಾಕರಿಂದ, ತೋಳಗಳಿಂದ ತಮ್ಮ ಕುರಿಗಳನ್ನು ರಕ್ಷಿಸುವ ಉದ್ದೇಶದಿಂದ ಅವುಗಳ

ಪಕ್ಕದಲ್ಲಿಯೇ ಮಲಗುತ್ತಾರೆ. ದಿನದ ಇಪ್ಪತ್ತುನಾಲ್ಕು ತಾಸು ಕೂಡ ಕುರಿಗಳ ಜೊತೆಯಲ್ಲಿ ಕಳೆಯುತ್ತಾರೆ. ಈ ಕುರಿ ಕಾಯುವ ಕಾಯಕವನ್ನು ಅವರು ಅತ್ಯಂತ ನಿಷ್ಠೆ, ಪ್ರಾಮಾಣಿಕತೆ ಹಾಗೂ ಪೂರ್ಣಕಾಲಿಕವಾಗಿ ಮಾಡಿ ಕಾಯಕ ನಿಷ್ಠೆಯಿಂದ ಮೆರೆಯುತ್ತಾರೆ. ಹೀಗಾಗಿ ಅವರು ಗ್ರಾಮದ ಇತರರ ಸಂಪರ್ಕಕ್ಕೆ ಹೆಚ್ಚಾಗಿ ಬರುವುದಿಲ್ಲ ಜೊತೆಗೆ ತಮ್ಮ ತಮ್ಮಲ್ಲಿ ಸಂಘಟನೆಯ ಭಾವ ಕೂಡ ಬೆಳೆಸಿಕೊಂಡಿರುವುದಿಲ್ಲ.

ಇದನ್ನು ಮನಗಂಡು ಎಪ್ಪತ್ತರ ದಶಕದ ಸಂದರ್ಭದಲ್ಲಿ ಗೊಂಡರು ತಮ್ಮಲ್ಲಿ (ಸಮುದಾಯದಲ್ಲಿ) ಆಗಿ ಹೋದ ಒಬ್ಬ ಮಾನವತಾವಾದಿ ನಾಯಕನನ್ನು ತಮ್ಮ ಪ್ರತಿನಿಧಿಯಾಗಿ ನಿಲ್ಲಿಸಲು ಪ್ರಯತ್ನ ಪಟ್ಟರು. ಆ ಮೂಲಕ ಸಂಘಟಿತಗೊಳ್ಳುವುದೇ ಇವರ ಉದ್ದೇಶವಾಗಿ(ದೆ)ತ್ತು. ಈ ಉದ್ದೇಶವನ್ನು ಪ್ರಸಾರಗೊಳಿಸಲೆಂದೇ ಹಳ್ಳಿ ಹಳ್ಳಿಗಳಲ್ಲಿ ಬೊಮ್ಮಗೊಂಡೇಶ್ವರನ ಮೂರ್ತಿಗಳನ್ನು ಸ್ಥಾಪಿಸಲು ಪ್ರಾರಂಭಿಸಿದರು. ಇದಕ್ಕೆ ಯಾವುದೇ ತರಹದ ಅಡ್ಡಿ ಆತಂಕಗಳು ಎದುರಾದರೂ ಲೆಕ್ಕಿಸದೇ ನೇರ ಹೋರಾಟಕ್ಕೆ ಇಳಿದರು. ಮೂರ್ತಿಗಳನ್ನು ಪ್ರತಿಷ್ಠಾಪಿಸುವ ಕುರಿತು ಜಿಲ್ಲೆಯ ಎರಡು ಹೋರಾಟಗಳನ್ನು ಇಲ್ಲಿ ಗಮನಿಸಬಹುದಾಗಿದೆ. ಅವುಗಳೆಂದರೆ (೧) ಕೊನಮೆಳಕುಂದಾದಲ್ಲಿ ನಡೆದ ಹೋರಾಟ, (೨) ಬೀದರ ನಗರದಲ್ಲಿ ನಡೆದ ಹೋರಾಟ.

**(೧) ಕೊನಮೆಳಕುಂದಾದಲ್ಲಿ ನಡೆದ ಹೋರಾಟ :**

ಭಾಲ್ಕಿ ತಾಲೂಕಕ್ಕೆ ಸೇರಿದ ಕೊನಮೆಳಕುಂದಾ ಗ್ರಾಮದಲ್ಲಿ ಬೊಮ್ಮಗೊಂಡೇಶ್ವರರ ಮೂರ್ತಿ ಸ್ಥಾಪಿಸುವ ಕುರಿತು ಇಲ್ಲಿನ ಗೊಂಡರು ತಿಂಗಳಾನುಗಟ್ಟಲೇ ಹೋರಾಟ ನಡೆಸಿದ್ದಾರೆ. ತಾವು ಕುರಿಗಳನ್ನು ಕೂಡಿಸುವ ಸ್ಥಳದಲ್ಲಿ ಮೂರ್ತಿ ಕೂಡಿಸಲು ಮುಂದಾದಾಗ ಇತರ ವರ್ಗದ ಕೆಲವರು ಸ್ಪಂದಿಸಿದರು, ಕೆಲವರು ವಿರೋಧಿಸಿದರು. ಆಗ ಗ್ರಾಮದ ಗೊಂಡರು ಪಂಚಾಯತಿಯನ್ನು ಕರೆಯಿಸಿದರು. ಅದಕ್ಕೆ ಅವರು ಸಹ ಸಂಪೂರ್ಣ ಒಪ್ಪಿಗೆ ಕೊಡದೇ ಹೋದರು. ಪಂಚಾಯತಿಯ ಅನೇಕ ಸದಸ್ಯರು ವಿರೋಧಿಸಿದರು. ಆಗ ಅನಿವಾರ್ಯವಾಗಿ ಗೊಂಡರು ಪ್ರತಿಭಟನೆಗಿಳಿದರು. ಗ್ರಾಮದಲ್ಲಿ ಈ ಸಮಸ್ಯೆ ಬಗೆಹರಿಯದೇ ಹೋದಾಗ ಇವರು ಬೀದರ ನಗರಕ್ಕೆ ಆಗಮಿಸಿ ಜಿಲ್ಲಾಧಿಕಾರಿಗಳ ಕಛೇರಿಯ ಎದುರುಗಡೆ ಮೂರು ದಿನ ಮುಷ್ಕರ ಹೂಡಿದರು. ಆಗ ಅಧಿಕಾರಿಗಳು ಮೂರ್ತಿ ಸ್ಥಾಪಿಸುವ ಸ್ಥಳಕ್ಕೆ ಆಗಮಿಸಿ ವಿವರಗಳನ್ನು ಪಡೆದು, ಗ್ರಾಮದಲ್ಲಿನ ಎಲ್ಲ ನಿವಾಸಿಗಳ ಅನುಮತಿ ಪಡೆದುಕೊಂಡು, ಬೊಮ್ಮಗೊಂಡೇಶ್ವರನ ಮೂರ್ತಿಯನ್ನು ಪ್ರತಿಷ್ಠಾಪಿಸಲು ಅನಮತಿಯನ್ನು ಕೊಟ್ಟರು. ಇದರ ಪರಿಣಾಮವಾಗಿ ಕೊನಮೆಳಕುಂದಾ ಗ್ರಾಮದಲ್ಲಿ ೨೧ನೇ ಡಿಸೆಂಬರ ೧೯೮೦ರಲ್ಲಿ ಮೂರ್ತಿಯನ್ನು ಸ್ಥಾಪಿಸಿದರು. ಇದರ ಉದ್ಘಾಟನಾ ಸಮಾರಂಭದಲ್ಲಿ ಉದ್ಘಾಟಕರಾಗಿ ಮಾಜಿ ಮುಖ್ಯಮಂತ್ರಿ ಡಿ.ದೇವರಾಜ ಅರಸ್ ಬಂದಿದ್ದರು , ಈ ಸಂದರ್ಭದಲ್ಲಿ ಹಿಂದೆ ಹೋರಾಟ ಮಾಡಿದ ಅಮೃತರಾವ ಚಿಮಕೋಡೆ, ದಲಿತ ಮತ್ತು ಬಿ. ನಾರಾಯಣ ಶೇಷಪ್ಪ ಕುರುಬಖೇಳಗಿ, ರಘುನಾಥರಾವ ಪಾಂಚಾಳ, ಕಂಟೆಪ್ಪ ಚಿಮಕೋಡ ಮುಂತಾದ ಗಣ್ಯವ್ಯಕ್ತಿಗಳು ಉಪಸ್ಥಿತರಿದ್ದು ಕಾರ್ಯಕ್ರಮಕ್ಕೆ ಮೆರಗನ್ನು ತಂದು ಕೊಟ್ಟಿದ್ದರು.

(೨)  ಬೀದರ ನಗರದಲ್ಲಿ ನಡೆದ ಹೋರಾಟ :

ಬೊಮ್ಮಗೊಂಡೇಶ್ವರನ ಕಾರ್ಯಕ್ಷೇತ್ರವಾದ ಬೀದರ ನಗರದಲ್ಲಿ ಇವರ ಭಾವಚಿತ್ರವನ್ನು ಕಬ್ಬಿಣದ ಸಲಾಕೆಯ ಮೇಲೆ ಇಳಿಸಿ ಸ್ಥಾಪಿಸಬೇಕೆಂದು 'ಜಿಲ್ಲಾ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಗೊಂಡ ತರುಣ ಸಂಘ'ವು ನಿರ್ಧರಿಸಿತು. ಇದರ ಆಶ್ರಯದಲ್ಲಿ ೧೯ನೇ ಆಗಸ್ಟ್ ೧೯೯೨ ರಂದು ಬೊಮ್ಮಗೊಂಡೇಶ್ವರರ ಚೌಕ ಸ್ಥಾಪಿಸಲಾಯಿತು. ಈ ಚೌಕ ಗಾಂಧೀ ಗಂಜಗೆ ಹೋಗುವ ದಾರಿಯಲ್ಲಿದೆ. ಈ ಚೌಕ ಸ್ಥಾಪನೆಯನ್ನು ಅಮೃತರಾವ ಚಿಮಕೋಡೆ, ಪಂಡಿತರಾವ ಚಿದ್ರಿ, ಮಾಳಪ್ಪ ಅಡಸಾರೆ, ಮುಸ್ಲಿಂ ಸಂಘಟನಾಕಾರರಾದ ಜುಲ್ಫೇಕರ ಹಶ್ಮಿ, ಜಿಲ್ಲಾ ಸರಕಾರಿ ಗೊಂಡ ನೌಕರರ ಸಂಘದ ಪ್ರಧಾನ ಕಾರ್ಯದರ್ಶಿ ಬಸವರಾಜ ಮಾಳಗೆ, ಕಾಶಿನಾಥರಾವ ಶೆರಿಕಾರ ತಡೋಳಾ, ವಿಠಲರಾವ ಬಗ್ದಲ ಮುಂತಾದವರು ಸೇರಿ ಬೊಮ್ಮಗೊಂಡೇಶ್ವರರ ಮೂರ್ತಿಯನ್ನೊಳಗೊಂಡಂತೆ ಚೌಕ್ ಒಂದನ್ನು ಸ್ಥಾಪಿಸಿದರು. ಈ ಕುರಿತ ಮಾಹಿತಿಯನ್ನು ಜಿಲ್ಲೆಯ ಎಸ್.ಪಿ. ಹಾಗೂ ಆಗಿನ ಮುಖ್ಯಮಂತ್ರಿ ಎಸ್.ಬಂಗಾರಪ್ಪನವರಿಗೂ ಇತರ ಇಲಾಖೆಗಳಿಗೂ ಕಳುಹಿಸಿಕೊಡಲಾಯಿತು.

ಹೀಗೆ ಬೊಮ್ಮಗೊಂಡೇಶ್ವರನ ಚೌಕವೇನೋ ಯಶಸ್ವಿಯಾಗಿ ಸ್ಥಾಪಿಸಲಾಯಿತು. ಆದರೆ ಅದೇ ದಿನ ರಾತ್ರಿ ಯಾರೋ ಸಮಾಜ ಘಾತುಕರಿಂದ ಈ ಮೂರ್ತಿಯನ್ನು ಅವಮಾನ ಗೊಳಿಸಲಾಯಿತು. ಬೊಮ್ಮಗೊಂಡೇಶ್ವರನ ಭಾವಚಿತ್ರವಿರುವ ಕಬ್ಬಿಣದ ಸಲಾಕೆಯನ್ನ ಮಣಿಸಿಹಾಕಿದ್ದರು. ಇದರಿಂದ ಬೊಮ್ಮಗೊಂಡೇಶ್ವರನ ಅನುಯಾಯಿಗಳಿಗೆ, ಬೀದರ ಜಿಲ್ಲೆಯ ಗೊಂಡರಿಗೆ ತೀವ್ರವಾದ ಹೋರಾಟಕ್ಕಿಳಿಯಲು ಕಾರಣವಾಯಿತು. ಬೊಮ್ಮಗೊಂಡೇಶ್ವರನ ಮೂರ್ತಿಗೆ ಆದ ಅವಮಾನವನ್ನು ಸಹಿಸಲಾರದೇ ಗೊಂಡರ ವಿವಿಧ ಸಂಘಟನೆಗಳು ಜಿಲ್ಲೆಯಾದ್ಯಂತ ಹೋರಾಟಕ್ಕಿಳಿದವು. ತಾಲೂಕುವಾರು ಊರುಗಳಲ್ಲಿ ಈ ಹೋರಾಟ ಮುಂದುವರೆಯಿತು. ಗೊಂಡರು ಇಷ್ಟೊಂದು ಪ್ರಮಾಣದಲ್ಲಿ ಸಂಘಟಿತರಾಗಿದ್ದಾರೆಂದು ನಗರದಲ್ಲಿ ನಡೆದ ಈ ಹೋರಾಟದಿಂದೇ ಸಾಬೀತಾಯಿತು. ಇದು ಸ್ವತಃ ಗೊಂಡರಿಗೆ ಆಶ್ಚರ್ಯ ತಂದ ವಿಷಯ. ಏಕೆಂದರೆ ಬೀದರ ಜಿಲ್ಲೆಯ ಗೊಂಡರ ಇತಿಹಾಸದಲ್ಲೇ ಇದು ಈ ವರೆಗಿನ ಪ್ರಮುಖ ಘಟನೆಯಾಗಿತ್ತು. ಹೀಗೆ ಬೊಮ್ಮಗೊಂಡೇಶ್ವರನ ಮೂರ್ತಿ ಸ್ಥಾಪನೆಗಳಿಂದ ಗೊಂಡರು ಸಂಘಟಿತರಾದದ್ದು ಅಷ್ಟೇ ಅಲ್ಲ ಹೋರಾಟಕ್ಕಿಳಿದದ್ದು ಗೊತ್ತಾಗುತ್ತದೆ. ಈ ವಿಷಯವನ್ನು ಸ್ಥಳೀಯ ಪತ್ರಿಕೆಗಳು ಕೂಡ ಸೂಕ್ತ ಪ್ರತಿಕ್ರಿಯೆಗಳನ್ನು ನೀಡುವುದರ ಮೂಲಕ ಹೋರಾಟಕ್ಕೆ ವಿಶಿಷ್ಟತೆಯನ್ನು ತಂದುಕೊಟ್ಟವು.

**ಬೊಮ್ಮಗೊಂಡೇಶ್ವರನ ಮೂರ್ತಿಗಳನ್ನು ಸ್ಥಾಪಿಸಿರುವ ಪ್ರಮುಖ ಊರುಗಳು :**

**ಬೀದರ ತಾಲೂಕು :**

ಬೀದರ ತಾಲೂಕಿನಲ್ಲಿ ಬೊಮ್ಮಗೊಂಡೇಶ್ವರನ ಮೂರ್ತಿಗಳಿರುವ ಊರುಗಳೆಂದರೆ ಬೀದರ ನಗರ, ನೆಲವಾಡ, ಮಂದಕನಳ್ಳಿ, ಕಮಠಾಣ, ಗೊರನಳ್ಳಿ, ಕೊಳಾರ(ಕೆ), ಚಿಮಕೋಡ, ಮಲ್ಕಾಪುರ, ಚಿಲ್ಲರ್ಗಿ, ಸಿಂದೋಲ, ಜನವಾಡಾ, ನವಲಾಸಪೂರ, ಅತಿವಾಳ, ಸಂಗೊಳಗಿ ಮುಂತಾದ ಹಳ್ಳಿಗಳಲ್ಲಿ ಬೊಮ್ಮಗೊಂಡೇಶ್ವರನ ಮೂರ್ತಿಗಳು ಸ್ಥಾಪಿತವಾಗಿವೆ.

**ಹುಮನಾಬಾದ :**

ಹುಮನಾಬಾದ ತಾಲೂಕಿನಲ್ಲಿ ಬೊಮ್ಮಗೊಂಡೇಶ್ವರನ ಮೂರ್ತಿಗಳಿರುವ ಊರುಗಳೆಂದರೆ ಚಿನಕೇರಾ, ಹಂದಿಕೇರಾ, ವಡ್ಡನಕೇರಾ, ನಂದಗಾಂವ, ಬೇವಿನ ಚಿಂಚೊಳಿ, ಕಪ್ಪರಗಾಂವ, ಮೀನಕೇರಾ, ಕೊಡಂಬಲ್, ಹಳ್ಳಿಖೇಡ, ಮಂದರಗಿ, ಮಂಗಲಗಿ, ನಿರ್ಣಾವಾಡಿ, ಮಲ್ಕಾಪುರವಾಡಿ, ಹಾಲಹಳ್ಳಿ, ಸಿತಾಳಗೇರಾ, ಕಬೀರಬಾದವಾಡಿ, ಮೊಳಕೇರಾ, ಮನ್ನಾ ಎಖೆಳ್ಳಿ, ಕನಕಟ್ಟಾ ಮುಂತಾದ ಊರುಗಳಲ್ಲಿ ಸ್ಥಾಪಿಸಲಾಗಿದೆ.

**ಭಾಲ್ಕಿ :**

ಭಾಲ್ಕಿ ತಾಲೂಕಿನ ಊರುಗಳೆಂದರೆ ಹಾಲಹಿಪ್ಪರಗಾ, ಕೊನಮೇಳಕುಂದಾ, ಬಾಜೋಳಗಾ, ಲಖಣಗಾಂವ, ಸಾಯಗಾಂವ, ಕೇಸರಜೇವಳಗಾ, ಹುಣಜಿ, ವಳಸಂಗ, ಅಂಬೆಸಾಂಗವಿ ಕ್ರಾಸ್, ಚಂದಾಪೂರ, ಖಟಕ ಚಿಂಚೋಳಿ, ಜಾಂತಿ, ಕಣಜಿ, ಹಲಬರ್ಗಾ ಮುಂತಾದ ಗ್ರಾಮಗಳಲ್ಲಿ ಬೊಮ್ಮಗೊಂಡೇಶ್ವರನ ಮೂರ್ತಿ ಸ್ಥಾಪಿಸಲಾಗಿದೆ.

**ಔರಾದ :**

ಔರಾದ ತಾಲೂಕಿನ ಊರುಗಳೆಂದರೆ, ಔರಾದ ನಗರ, ಜಂಬಗಿ, ತೋರಣಾ, ತೋರಣಾವಾಡಿ, ಠಾಣಾ ಕುಶನೂರ, ಸುಂದಾಳ, ಬಳತ(ಬಿ), ಬಳತ (ಕೆ), ಚಾಂದೂರಿ ಮುಂತಾದ ಕಡೆಗಳಲ್ಲಿ ಮೂರ್ತಿಗಳನ್ನು ಸ್ಥಾಪಿಸಲಾಗಿದೆ.

**ಬಸವಕಲ್ಯಾಣ :**

ಬಸವಕಲ್ಯಾಣ ತಾಲೂಕಿನ ಊರುಗಳೆಂದರೆ ಬಸವಕಲ್ಯಾಣ ನಗರ, ಮಂಠಾಳ, ಗೊರ್ಟಾ, ನಾರಾಯಣಪುರ, ಬೇಟಬೆಳಕುಂದಾ, ಸೀತಾಳಗೇರಾ, ಮಿರ್ಜಾಪುರ, ಇಲ್ಯಾಳ, ಅಲ್ಲಾಪುರ, ಸಸ್ತಾಪುರ, ಮೊರಖಂಡಿ ಮುಂತಾದ ಊರುಗಳಲ್ಲಿ ಬೊಮ್ಮಗೊಂಡೇಶ್ವರನ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ.

ಹೀಗೆ ಬೊಮ್ಮಗೊಂಡೇಶ್ವರನ ಮೂರ್ತಿಗಳು ಬೀದರ ಜಿಲ್ಲೆಯಾದ್ಯಂತ ಸ್ಥಾಪಿತಗೊಂಡಿವೆ. ಪಕ್ಕದ ಗಡಿ ಭಾಗದ ಮಹಾರಾಷ್ಟ್ರ ಹಾಗೂ ಆಂಧ್ರದ ಕೆಲವು ಗ್ರಾಮಗಳಲ್ಲಿ ಈ ಮೂರ್ತಿಗಳು ಕಾಣಸಿಗುತ್ತವೆ. ಒಟ್ಟಾರೆಯಾಗಿ ಬೊಮ್ಮಗೊಂಡೇಶ್ವರನ ಮೂರ್ತಿಗಳು, ದೇವಾಲಯಗಳು, ಭಾವಚಿತ್ರಗಳು ಗೊಂಡರು ಸ್ಥಾಪಿಸಿಕೊಂಡಿದ್ದಾರೆ. ಇವು ಪ್ರಾಚೀನವು ಏನಲ್ಲ. ಅರವತ್ತರ ದಶಕದ ಈಚೆಗೆ ಕಂಡು ಬರುತ್ತಿವೆ. ಈ ಮೂರ್ತಿಗಳು ಗೊಂಡರ ಸಂಘಟನೆಯ ಪ್ರತೀಕವೆಂಬಂತೆ ತಲೆ ಎತ್ತಿ ನಿಂತದ್ದು ಸ್ಪಷ್ಟವಾಗಿ ಗೋಚರಿಸುತ್ತದೆ.

- - -

# ಆಧಾರ ಗ್ರಂಥಗಳು

(೧) 'ಬೀದರ ಜಿಲ್ಲಾ ದರ್ಶನ'
ಸಂ. ಡಾ॥ ಜಗನ್ನಾಥ ಹೆಬ್ಬಾಳೆ
ಜಿಲ್ಲಾನ್ನಡ ಸಾಹಿತ್ಯ ಪರಿಷತ್, ಬೀದರ.
೧೯೯೨

(೨) 'ಸ್ಥಳೀಯ ಚರಿತ್ರೆ : ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ'
ಸಂ. ಪ್ರೊ. ಲಕ್ಷ್ಮಣ ತೆಲಗಾವಿ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬.
೨೦೦೩

(೩) 'ಜೀಶಂಪರವರ ಜಾನಪದ ಬರಹಗಳು'
ಸಂ. ಕಾಳೇಗೌಡ ನಾಗವಾರ, ಅಂಬಳಿಕೆ ಹಿರಿಯಣ್ಣ
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ
ಆಗಸ್ಟ ೧೦, ೨೦೦೦.

(೪) 'ಜಾನಪದ ಸಾಹಿತ್ಯ ದರ್ಶನ' ಭಾಗ - ೯
ಸಂ. ಎಸ್. ವೃಷಭೇಂದ್ರ ಸ್ವಾಮಿ.
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

## ೬. ಬೊಮ್ಮಗೊಂಡೇಶ್ವರರು ಸಮಾಜಕ್ಕೆ ಕೊಟ್ಟ ಕೊಡುಗೆ ಹಾಗೂ ಜನಪದರ ಮೇಲೆ ಬೀರಿದ ಪ್ರಭಾವ

**ಸಮಾಜಕ್ಕೆ ಕೊಟ್ಟ ಕೊಡುಗೆ :**

ವ್ಯಕ್ತಿಯೊಬ್ಬನನ್ನು ಸಮಾಜ ಅಥವಾ ಸಮುದಾಯ ಮತ್ತೆ ಮತ್ತೆ ನೆನೆಸಿಕೊಳ್ಳುವುದೆಂದರೆ ಆ ಹಿಂದೆ ಒಂದು ಮಹತ್ಕಾರ್ಯ ಆ ವ್ಯಕ್ತಿ ಎಸಗಿರುವನೆಂದೇ ಅರ್ಥ. ಅದರಲ್ಲೂ ಸಮಾಜದ ಹಿತಕ್ಕಾಗಿ ಮಾಡಿದಂತಹ ಮಹಾನ್ ಕಾರ್ಯಗಳು, ಪವಾಡಗಳು ಜನಪದರು ಮೆಲುಕು ಹಾಕುವುದನ್ನು ನೋಡಿದರೆ ಅದರ ಹಿಂದೆ ಯಾವುದೋ ಒಂದು ಕ್ರಿಯಾತ್ಮಕ ಪರಿಸರ ನಿರ್ಮಾಣಗೊಂಡಿದ್ದು ಸ್ಪಷ್ಟವಾಗುತ್ತದೆ. ಬೊಮ್ಮಗೊಂಡೇಶ್ವರ ಕೂಡ ಒಬ್ಬ ಮಾನವತಾವಾದಿ, ಪವಾಡ ಪುರುಷ, ದುಷ್ಟ ಸಂಹಾರಕ, ಸಾಂಸ್ಕೃತಿಕ ವೀರ ಎಂದು ಹೇಳಲು ಹೊರಟಾಗ ಆತನು ಸಮಾಜಕ್ಕೆ ಕೊಟ್ಟ ಕೊಡುಗೆಗಳನ್ನು ಗಣನೆಗೆ ತೆಗೆದುಕೊಳ್ಳಲೇಬೇಕಾಗುತ್ತದೆ.

ಹಿಂದೆ ಹೇಳಿರುವಂತೆ ನೀರಡಿಸಿದ ಬಹಮನಿ ಅರಸನಿಗೆ, ಆತನ ದಂಡಾಳುಗಳಿಗೆ ನೀರು ಕುಡಿಸಿ, ಬರಗಾಲದಲ್ಲಿ ಜನರಿಗೆ ಅನ್ನ ನೀಡಿ ಮಾನವತಾವಾದಿಯಾದದ್ದು, ನೀತಿ ಪಾಠ ಕಲಿಸಿ, ಮಳೆ ತರಿಸುವುದರ ಮೂಲಕ ಪವಾಡ ಪುರುಷನಾದದ್ದು, ದುಷ್ಟ ಗೋಸಾಯಿಯನ್ನು ಸಂಹರಿಸಿ ದುಷ್ಟ ಸಂಹಾರಕನಾದದ್ದು, ಮುಖ್ಯವಾಗಿ ಬೀದರ ಕೋಟೆ ನಿರ್ಮಾಣಕ್ಕೆ ಸಹಾಯ ಹಸ್ತ ನೀಡಿ ಇಡೀ ಪ್ರದೇಶದ ಜನರಿಗೆ ಪರರ ಆಕ್ರಮಣದಿಂದ ತಪ್ಪಿಸಿದ ಎಂಬ ಪ್ರತೀತಿ ಜನಪದರ ದೃಷ್ಟಿಯಲ್ಲಿ ಸಾಂಸ್ಕೃತಿಕ ವೀರನೆನಿಸಿಕೊಂಡದ್ದು ಎಲ್ಲವುಗಳನ್ನು ಹಿನ್ನೆಲೆಯಾಗಿಟ್ಟುಕೊಂಡೇ ಆತನು ಸಮಾಜಕ್ಕೆ ಕೊಟ್ಟ ಕೊಡುಗೆಗಳನ್ನು ಮನಗಾಣಿಸಿಕೊಳ್ಳಬೇಕಾಗಿದೆ.[೧]

ನೀರಡಿಸಿದ ಅರಸನಿಗೆ ನೀರು ಕುಡಿಸಿ ಸಂತೋಷಪಡಿಸಿದ್ದಕ್ಕಾಗಿ ಅರಸನು ಬೊಮ್ಮಗೊಂಡನಿಗೆ ಏನು ಬೇಕಾದರೂ ಕೇಳು ಕೊಡುತ್ತೇನೆ ಎಂದಾಗ ಬೊಮ್ಮಗೊಂಡ ಮೂರು ಮಾತುಗಳನ್ನೊಳಗೊಂಡಂತೆ ಅರಸನಿಗೆ ಭಾಷೆ ಪಡೆಯುತ್ತಾನೆ. ಅವುಗಳೆಂದರೆ ಮೊದಲನೆಯದು ಕುರಿಗಳನ್ನು ಮಾರಲು ಚೀಟಿ (ಕರ) ಬೇಡ, ಎರಡನೆಯದು ಸತ್ತ ಕುರಿಗಳನ್ನು ಹೊತ್ತು ಮಾರಲು ಅವಕಾಶ ಕೊಡಬೇಕು ಹಾಗೂ ಕೊನೆಯದು ಕುರಿಗಳನ್ನು, ದನಗಳನ್ನು ಮೇಯಿಸಲು ಗೋಮಾಳ, ಗಾಯಮಾಳ, ಪೆರಂಪೊಕಗಳನ್ನು ಮೀಸಲು ಬಿಡಬೇಕು.[೨]

ಹೀಗೆ ಅರಸನಿಂದ ಮೂರು ಅಂಶಗಳ ಭಾಷೆಯನ್ನು ಬೊಮ್ಮಗೊಂಡ ಪಡೆದುಕೊಳ್ಳುತ್ತಾನೆ. ಜನಪದ ಕಥೆ ಕೂಡ ಈ ಕುರಿತಂತೆ ಸ್ವಲ್ಪ ಮಾಹಿತಿಯನ್ನು ಒದಗಿಸುತ್ತದೆ. ಅದೆಂದರೆ - ''ರಾಜ 'ಗೊಂಡ ಕುರುಬ ನೀರು ಕುಡಿಸಿದಿ ನಮಗ, ನಮಗ ಆನಂದ ಆತು. ಮತ್ ನೀ ಯಾನ್ ಬೇಡ್ತಿ ಬೇಡು ನನಗ', 'ರಾಜಾ, ಸತ್ ಕುರಿ ಮಾರ್ಲಾಕ ಯಕ್ತೇದಿ ಕುಡು, ಅದಕ್ಕೇನು ಯಾರು ಕೇಳಬ್ಯಾಡ್ದು ಯಾರೂ ಹೇಳಬ್ಯಾಡ್ದು' ಅದಕ್ಕೆ ರಾಜ ಅನ್ನುತ್ತಾನೆ 'ಯಾನೋ ಹುಚ್ಚ, ನೀ ಏನ್ ಬೆಡ್ಲಾಕ್ ಹತ್ತಿದಿ? ಧನ ರಾಶಿ

---

ಅಡಿ ಟಿಪ್ಪಣಿ :

೧. ಅಮೃತರಾವ ಚಿಮಕೋಡೆ(೪೮) ಬೀದರ

೨. ಮಾಳಪ್ಪ ಅಡಸಾರೆ ಏಕಲಾರ(೩೫)

ಹಿಂತಾದು ಬೇಡಾದ್ ಬಿಟ್ಟು ಇದೆಂತಾದು ಬೇಡ್ಲಾಕತ್ತಿ ಹೋಗ್ ಕೊಟ್ಟೆ ಹೋಗು', ಗೊಂಡ ಕುರುಬ ಹೊರಟ.'[೧] ಹೀಗೆ ಬೊಮ್ಮಗೊಂಡ ಅರಸನಿಂದ ತನ್ನ ಹಾಗೂ ತನ್ನ ಜನಾಂಗಕ್ಕಾಗಿ ವರದಾನವನ್ನು ಪಡೆದುಕೊಂಡ. ಇದರ ಫಲವಾಗಿಯೇ ಎಂಬಂತೆ ಇಂದಿಗೂ ಕೂಡ ಬೀದರನಲ್ಲಿ ಕುರಿಗಳನ್ನು ಮಾರಲು ಯಾವುದೇ ತರಹದ ಕರ ಇರುವುದಿಲ್ಲ. ಜೊತೆಗೆ ಸತ್ತ ಕುರಿಗಳನ್ನು ಅಂದರೆ ಕಾರಣಾಂತರಗಳಿಂದ ಕುರಿಗಳು ಸತ್ತರೆ ಅವುಗಳನ್ನು ಹೊತ್ತುಕೊಂಡು ಹೋಗಿ ಮಾರಲು ಅವಕಾಶವಿದೆ. ಆದರೆ ಯಾವುದೇ ಸತ್ತ ಪ್ರಾಣಿಗಳನ್ನು ಮಾರಲು ಕರವಿಲ್ಲದೇ ಅವಕಾಶವಿಲ್ಲ. ಈ ಅವಕಾಶ ಕುರಿ ಸಾಕಾಣಿಕೆದಾರರಿಗೆ ಮಾತ್ರ ಇದ್ದುದ್ದನ್ನು ನೋಡಬಹುದಾಗಿದೆ. ಅಲ್ಲದೆ ಕುರಿ, ದನಗಳನ್ನು ಮೇಯಿಸಲು ಇಂತಿಷ್ಟು ಎಂದು ಹಳ್ಳಿ ಹಳ್ಳಿಗೆ ಸ್ವಲ್ಪ ಪ್ರದೇಶವನ್ನು ಬಿಟ್ಟುಕೊಡಲಾಗಿದೆ. ಇದಕ್ಕೆ ಯಾವುದೇ ರೀತಿಯಿಂದ ಹಣ ಸರಕಾರ ಪಡೆಯುವುದಿಲ್ಲ.

ಅದಕ್ಕಾಗಿಯೇ ಬೊಮ್ಮಗೊಂಡೇಶ್ವರನು ಸಮಾಜಕ್ಕೆ ಕೊಟ್ಟ ಮಹತ್ವದ ಕೊಡುಗೆಗಳೆಂದರೆ ಅರಸನಿಂದ ಪಡೆದ ಈ ಮೂರು ಪ್ರಮುಖ ಹಕ್ಕುಗಳೇ ಆಗುತ್ತವೆ. ಏಕೆಂದರೆ ಬೊಮ್ಮಗೊಂಡ ತನಗಾಗಿ ಯಾವುದೇ ಆಸೆಗೆ ಬಲಿಯಾಗದೇ ತನ್ನವರಿಗಾಗಿ ತನ್ನ ಜನಾಂಗಕ್ಕಾಗಿ ಆ ಸದಾವಕಾಶವನ್ನು ಉಪಯೋಗಿಸಿಕೊಂಡು ಮಹತ್ವದ ಕೊಡುಗೆಯನ್ನು ಸಲ್ಲಿಸಿದ್ದಾನೆ. ಆ ಮೂಲಕವಾಗಿ ಕುರಿ ಸಾಕಾಣಿಕೆದಾರರ ಅಥವಾ ಗೊಂಡರ ಈ ವರೆಗಿನ ಲಕ್ಷಗಟ್ಟಲೆ ಹಣವನ್ನು ಉಳಿತಾಯ ಮಾಡಿದ್ದಾನೆ. ಏಕೆಂದರೆ ಕುರಿಗಳನ್ನು ಮಾರಲು ಇಂತಿಷ್ಟು ಎಂದು ಹಣ ನಿಗದಿ ಮಾಡುವುದಾಗಲಿ, ಸತ್ತ ಕುರಿಯನ್ನು ಹೊತ್ತು ಮಾರಲು ಅವಕಾಶ ಇಲ್ಲದೇ ಹೋದರೆ, ಕುರಿ, ದನಗಳನ್ನು ಮೇಯಿಸಲು ಇಂತಿಷ್ಟು ಪ್ರದೇಶ ಶುಲ್ಕವಿಲ್ಲದೇ ಮೀಸಲು ಇಡದೇ ಹೋದರೆ ಇಂದು ಕುರಿ ಕಾಯುವವರ ಸ್ಥಿತಿ ಏನಾಗುತ್ತಿತ್ತು ಎಂಬುದು ಯೋಚಿಸುವಂತಹ ವಿಷಯ. ಅದಕ್ಕಾಗಿಯೇ ಇಲ್ಲಿನ ಗೊಂಡರೆಲ್ಲರೂ ಬೊಮ್ಮಗೊಂಡೇಶ್ವರನಿಗೆ ಚಿರಋಣಿ[೨] ಎಂಬಂತೆ ಹೇಳಿಕೊಳ್ಳುವುದರಲ್ಲಿ ಅಂಥ ಉತ್ಪ್ರೇಕ್ಷೆಯೇನೂ ಇಲ್ಲ. ಈ ಕುರಿತಂತೆ ಜನಪದ ಹಾಡೊಂದು ಈ ರೀತಿ ಇದೆ.

''ಬೊಮ್ಮಗೊಂಡಗ ಸರಕಾರ। ಕುರದು ಕೇಳ್ಯಾರ
ಏನು ಬೇಡುತಿ ಅಂದಾರ। ಬೇಡಿದ ಕುಡಲಕ ತಯ್ಯಾರ ॥

ಬೊಮ್ಮಗೊಂಡ ಕೇಳ್ಯಾರ। ಸತ್ ಕುರಿ ಹೊತ್ತ ಮಾರುತಾಂದರ
ಇದಕ ಸರಕಾರ ಒಪ್ಯಾರ। ಬೊಮ್ಮಗೊಂಡ ಖುಸಿ ಆಗ್ಯಾರ ॥

ಬೊಮ್ಮಗೊಂಡ ಕೇಳ್ಯಾರ। ಬಿದ್ದ ಪಡಿ ಅಡವಿ ಕುರಿಗೆ ಮೈಲಾಕ ಅಂದಾರ
ಕುರಿಗೆ ಚೀಟ(ಕರ) ಇಲ್ಲದಂಗ। ಮಾಫಿ ಬೊಮ್ಮಗೊಂಡ ಬೇಡ್ಯಾರ ॥

ಸರಕಾರ ಒಪ್ಯಾರ। ಬೊಮ್ಮಗೊಂಡ ಕೇಳಿದ್ದ ಕೊಟ್ಟಾರ
ಟಿಕ್ಸ ಮಾಫಿ ತಂದಾರ। ಜಗತ್ಯಾಕ ಉದ್ಧಾರ ಮಾಡ್ಯಾರ॥'[೩]

---

ಅಡಿ ಟಿಪ್ಪಣಿ :

೧. 'ಬೀದರ ಜಿಲ್ಲೆಯ ಜನಪದ ಕಥೆಗಳು' ಸಂ. ಕ್ಯಾತನಹಳ್ಳಿ ರಾಮಣ್ಣ, ಪು.೯.

೨. ಅಮೃತರಾವ ಚಿಮಕೋಡೆ(೨೮) ಬೀದರ

೩. 'ಬೊಮ್ಮಗೊಂಡೇಶ್ವರರ ಪವಾಡಗಳು' ಸಂ. ಮಾಳಪ್ಪ ಅಡಸಾರೆ. ಪು.೧೦.

ಇದೇ ತರಹದ ಸನ್ನಿವೇಶವನ್ನು ಇನ್ನೊಂದು ಜನಪದ ಹಾಡಿನಲ್ಲಿ ನೋಡಬಹುದು.

''ದಾನ ಕೊಡಲಿಯೇನೋ ನಿನಗ ದಿರವೆ ಕುಡಲಿಯೇನೋ
ಜಾಗೀರ ಕೊಡಲಿಯೆನೋ  ನಿನಗ ಬೊಮ್ಮಗೊಂಡೇಶ್ವರ ॥

ದಾನ ಕೊಡಲಿಬ್ಯಾಡ ನಮಗ ದಿರವೆ ಕೊಡಲಿಬ್ಯಾಡ
ಸತ್ತ ಕುರಿಯನು ರಾಜರಿ ಚಿಟ್ಟಿ ಬರಿಯಬ್ಯಾಡರಿ
ಸತ್ತ ಕುರಿಯನು ರಾಜರೇ ಹೊತ್ತು ಮಾರುತೇವ್ರಿ ॥

ಕ್ವಾಟಿ ಮುಲ್ತಾನಿ ಬಾಷ, ಗೊಡವಡಿ ಇಸ್ಮಲ ಖಾದ್ರಿ
ಜಾಗಿರಿ ಕೊಟ್ಟರ ಕುರಿಗಳಿಗಿ ಮೈಲಾಕ ಗೌಠನ ಕೊಟ್ಟಾರ
ಅವರು ಕುರಿಗಳ ಮೈಲಾಕ ಗೌಠನ ಕೊಟ್ಟಾರ ॥''[೧]

ಹೀಗೆ ಜನಪದರ ಹಾಡುಗಳಿಂದಲೇ ಬೊಮ್ಮಗೊಂಡೇಶ್ವರನು ಸಮಾಜಕ್ಕೆ ಕೊಟ್ಟ ಕೊಡುಗೆಗಳನ್ನು ಮನದಟ್ಟು ಮಾಡಿಕೊಳ್ಳಬಹುದಾಗಿದೆ. ಇಲ್ಲಿ ಬೊಮ್ಮಗೊಂಡ ಅರಸನಿಂದ ಪಡೆದುಕೊಂಡ ಹಕ್ಕುಗಳನ್ನು ಸ್ವಲ್ಪ ತಾರ್ಕಿಕವಾಗಿ ಯೋಚಿಸಿ ನೋಡಿದರೆ ಬೊಮ್ಮಗೊಂಡನ ದೂರದೃಷ್ಟಿ ಅಥವಾ ಮುಂದಾಲೋಚನೆ ಮೆಚ್ಚುವಂಥದ್ದಾಗಿದೆ.  ತನಗಾಗಿ ಏನಾದರೂ ಬೇಡಿದ್ದೇ ಆದರೆ ಅದು ತನ್ನೊಬ್ಬನ ಹಿತಕ್ಕಾಗಿಯೇ ಆಗಿರುತ್ತಿತ್ತು, ಅದು ಬೊಮ್ಮಗೊಂಡನಿಗೆ ಬೇಕಾಗಿರಲಿಲ್ಲ. ಅದರ ಬದಲಾಗಿ ನಾಯಕನಾದ ತಾನು ತನ್ನ ಜನರಿಗೋಸ್ಕರ ಏನಾದರೂ ಮಾಡಲೇಬೇಕು ಎಂದು ಯೋಚಿಸುತ್ತಿರುವಾಗಲೇ ಬಂದಂಥ ಸದವಕಾಶವನ್ನು ಜವಾಬ್ದಾರಿಯುತವಾಗಿ ಬಳಸಿಕೊಳ್ಳುವುದರಲ್ಲಿ ಜಾಣಾಕ್ಷತೆಯನ್ನು ತೋರಿಸಿದ್ದಾನೆ.  ಏಕೆಂದರೆ ಇಡೀ ಪ್ರದೇಶದ ಜನಾಂಗದ ಜವಾಬ್ದಾರಿಯೆಲ್ಲವೂ ತನ್ನ ಮೇಲೆ ಬಿದ್ದಿರುವಾಗ ಇನ್ನೊಂದೆಡೆ ಆತನ ಮನಸ್ಸು ಹರಿಯಲು ಸಾಧ್ಯವೇ ಇರಲಿಲ್ಲ.  'ತನ್ನ ಕುರಿ ತಾನು ಮಾರಲು, ಮೇಯಿಸಲು, ಅಪ್ಪಣೆ ಅರಸನಿಂದ ಪಡೆಯಬೇಕಾಗಿತ್ತೆ?' ಎಂಬ ಮಾತು ಬಂದಾಗ ಅದು ಅವರವರ ಆಲೋಚನಾ ರೀತಿ, ಕ್ರಿಯೆಗೆ ಕಾಣವಾಗುತ್ತದೆ ಎನ್ನಬಹುದು.  ತನ್ನ ಏಳಿಗೆಗಾಗಿ ಅಲ್ಲ ಸಮಾಜದ ಕಲ್ಯಾಣಕ್ಕಾಗಿ, ಅದಕ್ಕಾಗಿ ಬೊಮ್ಮಗೊಂಡೇಶ್ವರ ಸಮಾಜಕ್ಕೆ ಕೊಟ್ಟ ಕೊಡುಗೆ ಇಂದಿಗೂ ಸ್ಮರಣೀಯ.

ಬೀದರ ಕೋಟೆ ನಿರ್ಮಾಣಕ್ಕಾಗಿ ತನ್ನಲ್ಲಿರುವ ಪರುಷ ಬೊಂಬೆ (ಬಂಗಾರದ ಗೊಂಬೆ) ಅರಸನಿಗೆ ಸಹಾಯಕ್ಕಾಗಿ ಕೊಟ್ಟ ಎಂಬುದೊಂದು ಪ್ರತೀತಿ ಇದೆ.  ಈ ಬೊಂಬೆಯ ಯಾವ ಭಾಗವಾದರೂ ಕಡಿದು ಮಾರಿದರೆ ಮರು ದಿನ ಮತ್ತೆ ಆ ಭಾಗ ಬೆಳೆಯುತಿತ್ತು[೨] ಎನ್ನಲಾಗುತ್ತದೆ. ಅದರಿಂದಲೇ ಬಹಮನಿ ಅರಸನಿಗೆ ಸಹಾಯವಾಗಿ ನೀಡಿ ಬೀದರ ಕೋಟೆ ನಿರ್ಮಿಸಲು ಅನುವು ಮಾಡಿಕೊಟ್ಟನೆಂಬುದು ಜನಪದರ ಊಹನಾ ಸಿದ್ಧಾಂತ.  ಹೀಗಾಗಿ ಕೋಟೆ ನಿರ್ಮಾಣದಿಂದ ಬೀದರ ಪುನಃನಿರ್ಮಾಣಕ್ಕೆ ಬೊಮ್ಮಗೊಂಡ ಕಾರಣ ಇದೇ ಆತನ ಮಹತ್ ಕೊಡುಗೆಗಳಲ್ಲಿ ಒಂದು[೩]

---

**ಅಡಿ ಟಿಪ್ಪಣಿ :**

೧. ದ್ರೌಪದಿ ಶಂಕರ ಡೊಮನೆ(೪೦) ಅಷ್ಟೂರ
೨. ಶಾಂತಲಿಂಗ ಸ್ವಾಮಿ ಲಾಡಗೇರಿ (೬೨) ಬೀದರ
೩. ಅಮೃತರಾವ ಚಿಮಕೋಡೆ(೪೮) ಬೀದರ

ಎಂಬುದು ಜನಪದರ ಹೆಗ್ಗಳಿಕೆ. ಏಕೆಂದರೆ ಬಹಮನಿ ಅರಸರ ಕಾಲದಲ್ಲಿ ರಾಜಕೀಯ ಭದ್ರತೆ ಇಲ್ಲಿನ ಜನರು ಹೊಂದಿದ್ದರು ಎಂಬುದು ಇತಿಹಾಸದಿಂದ ತಿಳಿದು ಬರುತ್ತದೆ. ''ಬೊಮ್ಮಗೊಂಡನಿಗೆ ಸಿದ್ಧಿ ಸಾಧನೆ ಕಾಳಿದೇವಿಯಿಂದಾಗಿರುವುದಕ್ಕೆ ಅವಳಿಂದ ಪರುಷದ ಪುತ್ಥಳಿ (ಕಲ್ಪತರು) ಲಭಿಸಿ ಬೀದರ ಕೋಟೆ ಕಟ್ಟುವಲ್ಲಿ ಅದರ ಉಪಯೋಗ ಆಗಿರಲು ಸಾಧ್ಯತೆಗಳಿವೆ. ಅದಕ್ಕೆ ಸಾಕ್ಷಿಯಾಗಿ ಕೆಲವು ಅಂಶಗಳನ್ನು ಅವಲೋಕಿಸಬಹುದು. ಅಹಮದಷಾನು ಪ್ರತಿದಿನ ಮೂರು ಲಕ್ಷ ಹೊನ್ನು ಮಾರ ಹನ್ನೆರಡು ವರ್ಷದಲ್ಲಿ ಕೋಟೆ ಕಟ್ಟಿದನು ಎಂದು 'ಸುಲ್ತಾನ ಸುರಳಿ'ಯಲ್ಲಿ ಉಲ್ಲೇಖಿಸಲಾಗಿದೆ. ಸುಮಾರು ಒಂದುವರೆ ಲಕ್ಷ ಸೈನ್ಯ ಇಪ್ಪತ್ನಾಲ್ಕು ಸಾವಿರ ಪ್ರಾಣಿಗಳು (ಆನೆ, ಒಂಟೆ, ಕುದುರೆ, ಕತ್ತೆ ಇತ್ಯಾದಿ) ಇದ್ದವು. ಅವುಗಳಿಗಾಗುವ ಖರ್ಚು ಎಷ್ಟು? 'ಬೀದರಿಗೆ ಬರುವ ವಾರ್ಷಿಕ ಆದಾಯ ರೂ. ೬೯, ೪೨, ೧೦೨' (ಬೀದರ ಜಿಲ್ಲಾ ಗೆಝೆಟಿಯರ್ ೧೯೭೭ : ೯೮) ಅಂದರೆ ಆದಾಯಕ್ಕಿಂತ ನಲವತ್ತು ಪಟ್ಟು ಖರ್ಚು (ವೆಚ್ಚ) ಹೇಗೆ ಸಾಧ್ಯವೆಂಬುದು ಅವಲೋಕಿಸುವ ವಿಷಯವಾಗಿದೆ. "It is said Bomgonda a Kuruba (Gond) assisted in building the Historic fort of Bidar" (Shashi S.S., The Shepherds of India (A Social Study of Sheep and Cattle reading Communities) Delhi : Sundeep Prakashan, 1978, Page 61) ಹಾಗೂ ಬೀದರ ಒಳ ಕೋಟೆಯಲ್ಲಿಯ ಕಾಳಿಕಾದೇವಿ ದೇವಸ್ಥಾನ ಪರುಷದ ಪುತ್ಥಳಿಯ ಐತಿಹ್ಯಕ್ಕೆ ಸಾಕ್ಷಿಯಾಗಿದೆ.'[೯] ಹೀಗೆ ಒಂದೊಂದೇ ವಿಷಯಗಳು ತಾಳೆ ಹಾಕಿ ನೋಡಿದರೆ ಕೆಲವು ಸ್ಪಷ್ಟ ರೇಖೆಗಳು ಕಣ್ಣೆದುರಿಗೆ ಬರುತ್ತವೆ.

ಜನಪದರ ಯಾವುದೇ ಹೇಳಿಕೆಗಳನ್ನು ಸುಲಭವಾಗಿ ಸ್ವೀಕರಿಸಲು ಸಾಧ್ಯವಾಗಿರದ ಸಂದರ್ಭದಲ್ಲೂ ಕೆಲವು ಮಾರ್ಗಗಳಂತೂ ಕಾಣಿಸಿಕೊಳ್ಳುತ್ತವೆ. 'ಬೀದರ ಕೋಟೆ ನಿರ್ಮಾಣಕ್ಕೆ ಕಾರಣ ಕರ್ತನೇ ಬೊಮ್ಮಗೊಂಡ' ಎನ್ನುವ ಜನಪದರ ವ್ಯಾಖ್ಯೆ ಸಹಜವಾಗಿ ಸ್ವೀಕರಿಸಲೂ ಬಾರದೇ, ಅದು ಇನ್ನೂ ಅಧಿಕೃತ ಆಧಾರಗಳನ್ನು ಅಪೇಕ್ಷಿಸುತ್ತದೆ ಎನ್ನುವದಂತೂ ನಿಜ. ಬೊಮ್ಮಗೊಂಡ ಸಮಾಜಕ್ಕೆ ಕೊಟ್ಟ ಕೊಡುಗೆಗಳಲ್ಲಿ ಬೀದರ ಕೋಟೆ ನಿರ್ಮಾಣವೂ ಸೇರಿದೆ ಎನ್ನುವ ಜನಪದರ ಭಾವ ಆತನನ್ನು ಮಹಾತ್ಮನಾಗಿ ಮಾಡಿದೆ. ಮೌಖಿಕ ಆಕರಗಳ ಅನನ್ಯತೆ ಕುರಿತು ಮನಗಾಣಿಸುವುದೆಂದರೆ ಅದರ ಗರ್ಭದಲ್ಲೇ ಹುದುಗಿರುವ ಸ್ಥಳೀಯ ಅಂಶಗಳನ್ನು ಹೆಕ್ಕಿ ತೆಗೆಯುವುದು ಹಾಗೂ ಅವುಗಳನ್ನು ಅರ್ಥೈಸುವುದೆಂದೇ ಅರ್ಥ. ''ಮೌಖಿಕ ಚರಿತ್ರೆ ಮತ್ತು ಸ್ಥಳೀಯ ಚರಿತ್ರೆಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಬುಡಕಟ್ಟು ಸಮುದಾಯಗಳು ತಮ್ಮ ಚರಿತ್ರೆಯನ್ನು ಕಟ್ಟುವ ಕ್ರಿಯೆಯ ನೆಲೆಯಲ್ಲಿ ಸ್ಥಳೀಯ ಚರಿತ್ರೆಯ ತತ್ವಗಳು ಗ್ರಹಿಸಲು ಸಾಧ್ಯ.'[೧೦] ಜನಪದ ಆಕರಗಳ ಆಧಾರದಿಂದಲೇ ಬೊಮ್ಮಗೊಂಡನ ಚರಿತ್ರೆಯನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಈತನು ಸಮಾಜಕ್ಕೆ ಕೊಟ್ಟ ಕೊಡುಗೆಗಳಿಂದಲೇ ಜನರ ಸ್ಮೃತಿ ಕೋಶದಲ್ಲಿ ಜೀವಂತನಾಗಿ ಮೆರೆಯುತ್ತಿದ್ದಾನೆ.

---

**ಅಡಿ ಟಿಪ್ಪಣಿ :**

೯. 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂ. ಎಚ್.ಸಿ.ಶಿವಕುಮಾರ, ಪು. ೨೦.

೧೦. 'ಸ್ಥಳೀಯ ಚರಿತ್ರೆ : ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ' ಸಂ. ಪ್ರೊ.ಲಕ್ಷ್ಮಣ ತೆಲಗಾವಿ, ಪು. ೯.

ಜನರ ಬಾಯಿಂದ ಬಂದ ಈತನ ಒಟ್ಟು ಚರಿತ್ರೆ ಇವನೊಬ್ಬ ಸಾಂಸ್ಕೃತಿಕ ವೀರ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಈತನ ಕೊಡುಗೆಗಳನ್ನು ಮರೆಯಲಾರದೆ, ಮಾಸದಂತೆ ಸ್ಪಷ್ಟವಾಗಿ ಚಿತ್ರಿಸುತ್ತಾರೆ. ಇಂದು ಬೊಮ್ಮಗೊಂಡೇಶ್ವರನ ಕೊಡುಗೆಗಳು ಗೊಂಡರಲ್ಲಿ ಅಥವಾ ಸಮಾಜದಲ್ಲಿ ಏನಾದರೂ ಬದಲಾವಣೆಗೊಳ್ಳಲು ಕಾರಣವಾಗಿವೆಯೇ? ಎಂದು ಅವಲೋಕಿಸಿದಾಗ ಕೆಲವು ಸಕಾರಾತ್ಮಕ ಬದಲಾವಣೆ ಆಗಿದ್ದು ಕಂಡು ಬರುತ್ತದೆ. ಆ ಬದಲಾವಣೆ ಅಥವಾ ಪ್ರಗತಿಯನ್ನು 'ಗೊಂಡ ಬುಡಕಟ್ಟು ಮತ್ತು ಬೊಮ್ಮಗೊಂಡೇಶ್ವರರ' ಈ ದೃಷ್ಟಿಯಿಂದ ನೋಡಿದಾಗ ಬೊಮ್ಮಗೊಂಡೇಶ್ವರನ ಕೊಡುಗೆಯ ವಾಸ್ತವ ಅಂಶ ಗಮನಕ್ಕೆ ಬರುತ್ತದೆ.

**ಗೊಂಡ ಬುಡಕಟ್ಟು ಮತ್ತು ಬೊಮ್ಮಗೊಂಡೇಶ್ವರ :**

ಬೀದರ ಜಿಲ್ಲೆಯಲ್ಲಿ ಕಂಡು ಬರುವ ಬುಡಕಟ್ಟುಗಳಲ್ಲಿ ಗೊಂಡ ಬುಡಕಟ್ಟು ಕೂಡ ಒಂದಾಗಿದೆ. ಈ ಬುಡಕಟ್ಟಿಗೆ ಸೇರಿದವನಾದ ಬೊಮ್ಮಗೊಂಡೇಶ್ವರ ಗೊಂಡರ ಸಂಘಟನೆಗೆ ಮೂಲ ಶಕ್ತಿಯಾಗಿದ್ದಾನೆ. ''೧೫ನೇ ಶತಮಾನದಲ್ಲಿ ಮಹಾತ್ಮ ಬೊಮ್ಮಗೊಂಡ ಎಂಬ ಗೊಂಡರ ಮಹಾತ್ಮನಿಂದ ಬೀದರ ಕೋಟೆ ನಿರ್ಮಾಣವಾಯಿತೆಂದು ಜನಪದ ಕಥೆ ಹೇಳುತ್ತದೆ. ಇದು ಗೊಂಡರ ವಾಸ ಸ್ಥಾನಗಳಲ್ಲೆಲ್ಲ ಮಹಾತ್ಮ ಬೊಮ್ಮಗೊಂಡೇಶ್ವರನ ಮೂರ್ತಿಗಳು ಸ್ಥಾಪನೆಗೊಂಡಿರುವುದು ಗೊಂಡ ಬುಡಕಟ್ಟಿನ ಸಂಘಟನೆ ಹೋರಾಟಮಯ ಸಂಸ್ಕೃತಿಯ ಪ್ರತೀಕವಾಗಿದೆ.''[೧೧] ಮೂಲ ಆದಿವಾಸಿಗಳಾದ ಗೊಂಡ ಬುಡಕಟ್ಟಿನಲ್ಲಿ ಹುಟ್ಟಿದ ಬೊಮ್ಮಗೊಂಡೇಶ್ವರ ತನ್ನ ಹಾಗೂ ಸಮಾಜದ ಇತರ ಜನರನ್ನು ಜಾಗೃತಿ ಮಾಡಿದ್ದಾನೆ. ಸಮಾಜವನ್ನು ಸನ್ಮಾರ್ಗದಲ್ಲಿ ನಡೆಸಿದ್ದಾನೆ. ಗಾಂಧಿ ದೇಶಕ್ಕೆ ಸ್ವಾತಂತ್ರ್ಯವನ್ನು ತಂದುಕೊಡಲು ಕೋಲು ಹಿಡಿದು ಹೋರಾಡಿದ. ಬೊಮ್ಮಗೊಂಡ ಕೂಡ ತನ್ನ ಜನತೆಯ ಒಳಿತಿಗಾಗಿ ಕುರಿ ಕಾಯುವ ಒಂದು ವಂಕನ ಬಡಿಗೆ ಹಿಡಿದು ಜಾಗೃತಿ ಮಾಡಿದ್ದಾರೆ. ಗೊಂಡ ಬುಡಕಟ್ಟಿಗೆ ಬೊಮ್ಮಗೊಂಡೇಶ್ವರರ ಕೊಡುಗೆಯನ್ನು ಗೊಂಡರ ಸಂಘಟನೆಯ ಹಿನ್ನೆಲೆಯಲ್ಲಿ ನೋಡುವುದು ಹೆಚ್ಚು ಸೂಕ್ತವೆನಿಸುತ್ತದೆ.

೧೯೫೬ರ ಸಂದರ್ಭದಿಂದ ಇಂದಿನವರೆಗೆ ಸಂಘಟಿತರಾಗಿ ಅವಿರತ ಹೋರಾಟ ನಡೆಸುತ್ತ ಬಂದಿದ್ದಾರೆ. ಅಂದು ಸಂಘಟನೆಗೊಂಡ ಸಮಾಜ ತೊಂಬತ್ತರ ದಶಕದ ಸಂದರ್ಭದಲ್ಲಿ ವಿವಿಧ ಉದ್ದೇಶಗಳ ಇಡೇರಿಕೆಗಾಗಿ ಹೋರಾಟಕ್ಕೆ ಇಳಿದಿತು. ದಿವಂಗತ ನಾಗಪ್ಪ ಚಿದ್ರಿಯವರು (೧೯೫೬) ಬೀದರ ಜಿಲ್ಲೆಯ ಹಳ್ಳಿ ಹಳ್ಳಿಗೆ ಸಂಚರಿಸಿ ಬೊಮ್ಮಗೊಂಡೇಶ್ವರನ ಚರಿತ್ರೆಯನ್ನು ಹಿರಿಯರಿಂದ ಕೇಳುತ್ತಾ ಹೇಳುತ್ತಾ ಗೊಂಡರನ್ನು ಸಂಘಟಿಸುವ ಕಾರ್ಯ ಮಾಡಿದರು.

ಆ ಸಂಘಟನೆ ಮುಂದೆ ಹೋರಾಟ ರೂಪ ತಾಳಿತು. ಇಡೀ ಜಿಲ್ಲೆಯಲ್ಲಿಯೇ ಹೋರಾಟದ ಅಲೆಯನ್ನು ಎಬ್ಬಿಸಿತು. ಮುಖ್ಯವಾಗಿ ಇಂದಿನ ಸಮಾಜದಲ್ಲಿ ಗೊಂಡ ಹಾಗೂ ಕುರುಬ ಎಂಬ ಪದಗಳ

---

**ಅಡಿ ಟಿಪ್ಪಣಿ :**

೧೧. 'ಬೀದರ ಜಿಲ್ಲಾ ದರ್ಶನ' ಸಂ. ಡಾ॥ ಜಗನ್ನಾಥ ಹೆಬ್ಬಾಳೆ, ಪು.೧೨೧.

ನಡುವಿನ ಗೊಂದಲ ಅನಾವಶ್ಯಕವಾಗಿ ಸಮಸ್ಯೆಯನ್ನು ತಂದೊಡ್ಡಿದೆ. ಜೊತೆಗೆ ಗೊಂಡರಿಗೆ ಪ್ರಮಾಣ ಪತ್ರ ಹಾಗೂ ವಿವಿಧ ಸವಲತ್ತುಗಳು ಸಿಗದೆ ಸರಕಾರದಿಂದ ಅನ್ಯಾಯವಾಗಿದೆ ಎಂದು ಪ್ರತಿಭಟಿಸಿದ್ದಾರೆ. ಗೊಂಡರ ಅನೇಕ ಸಂಘ-ಸಂಸ್ಥೆ, ಸ್ವ-ಸಹಾಯ ಗುಂಪು, ಸಮೂದಾಯ ಭವನ ಮುಂತಾದವುಗಳು ಸಂಘಟಿತಗೊಂಡಿರುವುದಕ್ಕೆ ಸಾಕ್ಷಿಯಾಗಿದೆ.

ಅವುಗಳಲ್ಲಿ ಕೆಲವು ಈ ರೀತಿ ಇವೆ :

- ಮಹಾತ್ಮ ಬೊಮ್ಮಗೊಂಡೇಶ್ವರ ಶಿಕ್ಷಣ ಸಂಸ್ಥೆ, ಬೀದರ.
- ಜಿಲ್ಲಾ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಗೊಂಡ ತರುಣ ಸಂಘ, ಬೀದರ.
- ಬೀದರ ಜಿಲ್ಲಾ ಗೊಂಡ ನೌಕರರ ಸಂಘ, ಬೀದರ.
- ಗುರು ಮಹಾತ್ಮ ಬೊಮ್ಮಗೊಂಡೇಶ್ವರ ಸಹಕಾರ ಸಂಘ ಗೊಡಂಪಳ್ಳಿ ತಾ॥ಜಿ॥ ಬೀದರ.
- ಕನಕ ಪತ್ತಿನ ಸಹಕಾರ ಸಂಘ, ಬೀದರ.
- ಕನಕದಾಸ ಕುರಿ ಮತ್ತು ಉಣ್ಣೆ ಉತ್ಪಾದಕರ ಕೂಲಿಗಾರರ ಸಹಕಾರ ಸಂಘ, ಯರನಳ್ಳಿ, ತಾ॥ ಜಿ॥ ಬೀದರ.
- ಕನಕದಾಸ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ಚಿಮಕೋಡ ತಾ॥ ಜಿ॥ ಬೀದರ.
- ಭಕ್ತ ಕನಕದಾಸ ಉಣ್ಣೆ ಉತ್ಪಾದಕರ ಸಹಕಾರ ಸಂಘ ಧೂಪದ ಮಹಾಗಾಂವ, ತಾ॥ ಔರಾದ ಜಿ॥ ಬೀದರ.
- ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಉಣ್ಣೆ ನೇಕಾರರ ಸಹಕಾರ ಸಂಘ ಚಾಂದೋರಿ ತಾ॥ ಔರಾದ ಜಿ॥ ಬೀದರ.
- ದೇವರಾಜ ಅರಸ ಪತ್ತಿನ ಸಹಕಾರ ಸಂಘ, ಹುಮನಾಬಾದ ಜಿ॥ ಬೀದರ.
- ಬೀರಲಿಂಗೇಶ್ವರ ಪತ್ತಿನ ಸಹಕಾರ ಸಂಘ, ಹುಮನಾಬಾದ ಜಿ॥ ಬೀದರ.
- ಮೈಲಾರ ಮಲ್ಲಣ್ಣ ಪತ್ತಿನ ಸಹಕಾರ ಸಂಘ, ಹುಮನಾಬಾದ ಜಿ॥ ಬೀದರ.
- ಮೈಲಾರ ಲಿಂಗೇಶ್ವರ ಕುರಿ ಮತ್ತು ಉಣ್ಣೆನೇಕಾರರ ಸಹಕಾರ ಸಂಘ, ಸೀತಾಳಗೇರಾ ತಾ॥ ಹುಮನಾಬಾದ ಜಿ॥ ಬೀದರ.
- ಕುರಿ ಸಂಗೋಪನೆ ಉಣ್ಣೆ ಉತ್ಪಾದಕ ನೇಕಾರರ ಸಹಕಾರ ಸಂಘ, ತಾಳಮಡಗಿ ತಾ॥ ಹುಮನಾಬಾದ ಜಿ॥ ಬೀದರ.
- ಬೀರಲಿಂಗೇಶ್ವರ ಉಣ್ಣೆ ಉತ್ಪಾದಕರ ಸಹಕಾರ ಸಂಘ ಕೋಹಿನೂರ, ತಾ॥ ಬಸವಕಲ್ಯಾಣ ಜಿ॥ ಬೀದರ.

ಮುಂತಾದವುಗಳನ್ನು ಬೀದರ ಜಿಲ್ಲೆಯಲ್ಲಿ ಗೊಂಡರು ವಿವಿಧ ಉದ್ದೇಶಗಳ ಈಡೇರಿಕೆಗಾಗಿ ಅನೇಕ ಸಂಘ-ಸಂಸ್ಥೆಗಳನ್ನು ರಚಿಸಿಕೊಂಡು ಸಂಘಟಿತರಾಗಿದ್ದಾರೆ. ಗೊಂಡರ ಸಂಘಟನೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿರುವ ಸಂಘವೆಂದರೆ ಜಿಲ್ಲಾ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಗೊಂಡ ತರುಣ ಸಂಘ, ಬೀದರ. ಈ ಸಂಘವು ಬೀದರ ಜಿಲ್ಲೆಯ ಗೊಂಡರನ್ನು ಸಂಘಟಿಸುವಲ್ಲಿ ಅವಿರತವಾಗಿ ಶ್ರಮಿಸಿದೆ.

ಸಂಘಟನೆ ಮಾಡುವುದರ ಮೂಲಕ ಈ ಸಂಘ ಹೊಸದೊಂದು ಚಳುವಳಿಯೇ ಹುಟ್ಟು ಹಾಕಿತು. ಈ ಸಂಘ ಹುಟ್ಟು ಹಾಕಿದ ಈ ಚಳುವಳಿ ತೊಂಬತ್ತರ ದಶಕದಲ್ಲಿ ತೀವ್ರ ಹೋರಾಟಗಳನ್ನು ಮಾಡಿ ತಾವು ಸಾಕ್ಷರರಾಗಬೇಕು ಹಾಗೂ ಸ್ವಾಭಿಮಾನ ಬೆಳೆಸಬೇಕು ಎಂಬ ಉದ್ದೇಶದೊಡನೆ ವಿವಿಧ ಬೇಡಿಕೆಗಳನ್ನು ಸರಕಾರದ ಮುಂದಿಟ್ಟಿತು.

ಆ ಬೇಡಿಕೆಗಳೆಂದರೆ -

- ಗೊಂಡರಿಗೆ 'ಗೊಂಡ' ಪ್ರಮಾಣ ಪತ್ರ ನೀಡುವುದು.
- ಗೊಂಡ ಸಮಾಜಕ್ಕೆ ಯಾವುದೇ ಅನ್ಯಾಯ ಆಗದಂತೆ ಕ್ರಮ ಕೈಗೊಳ್ಳುವುದು.
- ವಿವಿಧ ಗ್ರಾಮಗಳಲ್ಲಿ ಬೊಮ್ಮಗೊಂಡೇಶ್ವರರ ಮೂರ್ತಿ ಸ್ಥಾಪಿಸಲು ಅನುಮತಿ ನೀಡುವುದು.
- ವಿವಿಧೆಡೆ ಸಮುದಾಯ ಭವನ ನಿರ್ಮಿಸಲು ಆಗ್ರಹಿಸುವುದು.

ಇಂಥಹ ಅನೇಕ ಬೇಡಿಕೆಗಳಿಗೆ ಆಗ್ರಹಿಸಿ ಈ ವರೆಗೆ ಹೋರಾಟವನ್ನು ನಡೆಸಿಕೊಂಡು ಬರುತ್ತಿದೆ. ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಗೊಂಡ ತರುಣ ಸಂಘದ ಶಾಖೆಗಳು ತಾಲೂಕು ಮಟ್ಟದಲ್ಲೂ ಹುಟ್ಟಿಕೊಂಡಿವೆ. ಬೀದರ, ಭಾಲ್ಕಿ, ಔರಾದ, ಬಸವಕಲ್ಯಾಣ, ಹುಮನಾಬಾದಗಳಲ್ಲಿನ ಈ ಶಾಖೆಗಳು ಗೊಂಡ ಪ್ರಮಾಣ ಪತ್ರ ಪಡೆಯುವ ಕುರಿತು ಇಡೀ ಜಿಲ್ಲೆಯಲ್ಲಿಯೇ ಚಳುವಳಿ ನಡೆಸಿದವು. ೧೯೯೦ರ ಸಂದರ್ಭದಲ್ಲಿ ತೀವ್ರಗೊಂಡ ಈ ಚಳುವಳಿಗೆ ಇಲ್ಲಿನ ಪ್ರಾದೇಶಿಕ ಪತ್ರಿಕೆಗಳು ಒಳ್ಳೆ ಪ್ರತಿಕ್ರಿಯೆ ನೀಡಿದವು. ಬೀದರಿನ ಅನೇಕ ಗ್ರಾಮಗಳಲ್ಲಿ ಗೊಂಡ ಸಮ್ಮೇಳನಗಳೂ ಕೂಡ ನಡೆಸಿದವು. ಎಲ್ಲೆಡೆ ಗೊಂಡ ಪುರುಷರು, ಮಹಿಳೆಯರು ಸಂಘಟಿತರಾದರು. ಮಹಾತ್ಮ ಬೊಮ್ಮಗೊಂಡೇಶ್ವರರ ಹೆಸರನ್ನೊಳಗೊಂಡು ವಿವಿಧ ಹೆಸರಿನಲ್ಲಿ ಅನೇಕ ಗ್ರಾಮಗಳಲ್ಲಿ ಸಂಘಗಳು ರಚಿಸಿಕೊಂಡು ಪದಾಧಿಕಾರಿಗಳನ್ನು ನೇಮಿಸಿದರು. ಈ ಸಂಘದ ಹೋರಾಟಕ್ಕೆ ದಲಿತ ಸಂಘರ್ಷ ಸಮಿತಿ, ಮುಸ್ಲಿಂ ಸಂಘಟನೆಗಳು ತಮ್ಮ ಬೆಂಬಲ ಸೂಚಿಸಿದವು.

ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಗೊಂಡ ತರುಣ ಸಂಘದ ಹೋರಾಟದಲ್ಲಿ ಜಿಲ್ಲಾದ್ಯಂತ ಅನೇಕ ಗಣ್ಯರು ಪಾಲ್ಗೊಂಡರು. ಅವರಲ್ಲಿ ಪ್ರಮುಖರೆಂದರೆ ಅಮೃತರಾವ ಚಿಮಕೋಡೆ, ಮಾಳಪ್ಪ ಅಡಸಾರೆ, ಬಿ.ನಾರಾಯಣ, ಪಂಡಿತ ಚಿದ್ರಿ, ಸಿದ್ದಯ್ಯ ಆಧುನಿಕ ಒಡೆಯರ, ನರಸಿಂಗ ಚಂದಾಪೂರೆ, ಡಿ.ಭೀಮಸಿಂಗ್, ಭೀಮಣ್ಣ ಕೊಳ್ಳೆ, ಶ್ರವಣ ಕುಮಾರ ಭಂಡೆ, ಅಮೃತ ವನಮಾರಪಳ್ಳಿ, ವೈಜಿನಾಥ ಕುಂಟೆಸಿರ್ಸಿ, ಶಿವಕುಮಾರ ಹುಣಜಿ, ಅಮೃತ ಹುಲಗುತ್ತಿ ಫಾಳೆಪ್ಪ ರೇಕುಳಗಿ, ನಾರಾಯಣ ರಾಂಪುರೆ, ವೈಜಿನಾಥ ಪೂಜಾರಿ, ಬಂಡೆಪ್ಪ ಮೇತ್ರೆ, ಶ್ರೀನಿವಾಸ ಯದಲಾಪುರ, ಶಿವರಾಜ ಚಿಮಕೇರಿ, ಬಸವರಾಜ ಬರ್ನಳ್ಳಿ, ದೇವೇಂದ್ರ ಕುಂಬಾರ ಚಿಂಚೋಳಿ, ಕಾಶಿನಾಥ ಮಡ್ಡೆ, ರಘುನಾಥ ರಾಯಗೊಂಡ, ಶೇಷಪ್ಪ ಪಾವಡೆ ಮುಂತಾದವರು ಹೋರಾಟದಲ್ಲಿ ಪಾಲ್ಗೊಂಡರು.

---

ಬೊಮ್ಮಗೊಂಡೇಶ್ವರನ ಮೂರ್ತಿಯನ್ನು ಬೀದರ ನಗರದಲ್ಲಿ ಜಿಲ್ಲಾ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಗೊಂಡ ಸಂಘದ ಆಶ್ರಯದಲ್ಲಿ ದಿನಾಂಕ ೧೯ನೇ ಆಗಸ್ಟ್ ೧೯೯೨ರಲ್ಲಿ ಸ್ಥಾಪಿಸಲಾಗಿತ್ತು. ಆದರೆ ಸಮಾಜ ಘಾತುಕರಿಂದ ಮೂರ್ತಿ ವಿಘ್ನಗೊಳಿಸಲ್ಪಟ್ಟಿತ್ತು. ಆಗ ರೊಚ್ಚಿಗೆದ್ದ ಗೊಂಡರು ಇಡೀ ಜಿಲ್ಲೆಯಲ್ಲಿ ಪ್ರತಿಭಟನೆ ನಡೆಸಿದರು. ಈ ತೀವ್ರ ಪ್ರತಿಭಟನೆ ಬೀದರ ಗೊಂಡರ ಇತಿಹಾಸದಲ್ಲಿ ನಡೆದ ಮೊದಲ ಐತಿಹಾಸಿಕ ಪ್ರತಿಭಟನೆ. ಇದು ಬೊಮ್ಮಗೊಂಡೇಶ್ವರರು ಗೊಂಡರಿಗೆ ಕೊಟ್ಟ ಮಹತ್ ಕೊಡುಗೆ ಎಂದೇ ಹೇಳಬೇಕು. ಕಾರಣ ಯಾವುದೇ ಸಮಾಜಕ್ಕೆ ಅಥವಾ ಸಮುದಾಯಕ್ಕೆ ಸಂಘಟನೆ ಮುಖ್ಯ. ಗೊಂಡರಲ್ಲಿ (ಬೀದರ ಜಿಲ್ಲೆಯ) ಸಂಘಟನೆ ಮನೋಭಾವ ಬೆಳೆದದ್ದು ಬೊಮ್ಮಗೊಂಡೇಶ್ವರ ಹೆಸರಿನಡಿಯಲ್ಲಿಯೇ. ಅದಕ್ಕಾಗಿ ಬೊಮ್ಮಗೊಂಡ ಸಮಾಜಕೆ ಕೊಟ್ಟ ಕೊಡುಗೆಗಳಲ್ಲಿ ಈಗಲೂ ಚಾಲ್ತಿಯಲ್ಲಿರುವುದೆಂದರೆ ಅರಸನಿಂದ ಪಡೆದ ಆ ಮೂರು ಹಕ್ಕುಗಳು, ಗೊಂಡರ ಸಂಘಟನೆ ಮತ್ತು ಹೋರಾಟವೆಂದೇ ಹೇಳಬಹುದು. ಗೊಂಡರ ಹೋರಾಟದ ಪ್ರತಿಫಲವೆಂಬಂತೆ ಸರಕಾರ ಹಿಂದಿನಂತೆ ಮುಂದೆಯು ಗೊಂಡ ಪ್ರಮಾಣ ಪತ್ರ ಕೊಡಲು ಒಪ್ಪಿಕೊಂಡಿತು. ಈಗ ಅನೇಕ ಗೊಂಡ ಜನರು ಕೇಂದ್ರ ಹಾಗೂ ರಾಜ್ಯ ಸರಕಾರದಲ್ಲಿ ಎ-ವರ್ಗದಿಂದ ಡಿ-ವರ್ಗದವರೆಗೆ ನೌಕರರಾಗಿ ಸೇವೆ ಸಲ್ಲಿಸುತ್ತಿರುವುದು ಗೊಂಡರ ಪ್ರಗತಿಯ ಸಂಕೇತವೆಂದೇ ಹೇಳಬಹುದು.[೧೩] ಇವರು ಸಮಾಜದಲ್ಲಿ ಇಂದು ಅಭಿವೃದ್ಧಿಯನ್ನು ಹೊಂದುತ್ತಿದ್ದಾರೆ. ಶಿಕ್ಷಣ ಪಡೆಯುವುದರ ಮೂಲಕ ಸ್ವಾಭಿಮಾನವನ್ನು ಬೆಳೆಸಿಕೊಂಡಿದ್ದಾರೆ. ಆದರೆ ಗ್ರಾಮೀಣ ಪ್ರದೇಶದಲ್ಲಿ ಇನ್ನೂ ಸುಧಾರಿಸಿಲ್ಲವೆಂದೇ ಹೇಳಬಹುದು.

**ಬೊಮ್ಮಗೊಂಡೇಶ್ವರನ ಹೆಸರಿನ ಶಿಕ್ಷಣ ಸಂಸ್ಥೆ :**

ಬೀದರ (ಜಿಲ್ಲೆ) ನಗರದಲ್ಲಿ ಬೊಮ್ಮಗೊಂಡೇಶ್ವರನ ಹೆಸರಿನ 'ಮಹಾತ್ಮ ಬೊಮ್ಮಗೊಂಡೇಶ್ವರ ಶಿಕ್ಷಣ ಸಂಸ್ಥೆ' ಎಂಬ ಒಂದೇ ಒಂದು ಶಿಕ್ಷಣ ಸಂಸ್ಥೆ ಇದೆ. ಈ ಸಂಸ್ಥೆಯ ಅಡಿಯಲ್ಲಿ ಅನೇಕ ಶಾಲಾ ಕಾಲೇಜುಗಳು ಇಲ್ಲಿನ ಶೈಕ್ಷಣಿಕ ಅವಶ್ಯಕತೆ ಪೂರೈಸುತ್ತಿವೆ.

ಅವುಗಳೆಂದರೆ -

☞ ಕವಿರತ್ನ ಕಾಳಿದಾಸ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ, ಬೀದರ.

☞ ಶ್ರೀ ಡಿ.ದೇವರಾಜ ಅರಸ ಶಿಕ್ಷಕ ತರಬೇತಿ ಕೇಂದ್ರ, ಬೀದರ.

☞ ಮಹಾತ್ಮ ಕನಕದಾಸ ಪ್ರೌಢ ಶಾಲೆ, ಶೆಡೋಳ, ಹುಮನಾಬಾದ.

☞ ಸಂಗೊಳ್ಳಿ ರಾಯಣ್ಣ ಪ್ರೌಢ ಶಾಲೆ, ಆಣದೂರ.

☞ ರಾಮಸ್ವಾಮಿ ಪೆರಿಯಾರ ಪ್ರೌಢ ಶಾಲೆ, ಕೊಳಾರ (ಕೆ).

☞ ಮಾತೋಶ್ರೀ ಅಹಿಲ್ಯಾದೇವಿ ಹೋಳ್ಕರ ಕನ್ಯಾ ಪ್ರೌಢ ಶಾಲೆ, ಬೀದರ.

☞ ಮಹಾತ್ಮ ಬೊಮ್ಮಗೊಂಡೇಶ್ವರ ಪ್ರಾಥಮಿಕ ಶಾಲೆ, ನಾವದಗೇರಿ, ಬೀದರ.

☞ ಏಕಲವ್ಯ ಪ್ರಾಥಮಿಕ ಶಾಲೆ, ಬೀದರ.

☞ ರಾಮಕೃಷ್ಣ ಪರಮಹಂಸ ಪ್ರಾಥಮಿಕ ಶಾಲೆ, ಬೀದರ.

---

**ಅಡಿ ಟಿಪ್ಪಣಿ** :

೧೩. ಕುರುಬ ಗೊಂಡ ಧರ್ಮಗುರು ಸಿದ್ದಯ್ಯ ಆಧುನಿಕ ಒಡೆಯರ್

ಹೀಗೆ ಗೊಂಡರಲ್ಲಿರುವ ಸಂಘಟನೆ ಹಾಗೂ ಹೋರಾಟದ ಪ್ರತೀಕವೆಂಬಂತೆ ಬೊಮ್ಮಗೊಂಡೇಶ್ವರ ಕಾಣಿಸಿಕೊಂಡಿದ್ದಾನೆ. ಬೊಮ್ಮಗೊಂಡೇಶ್ವರನ ಹೆಸರುಳ್ಳ ಸಂಘ-ಸಂಸ್ಥೆಗಳಷ್ಟೇ ಅಲ್ಲ ಅಂಗಡಿ, ಹಿಟ್ಟಿನ ಗಿರಣಿ, ವ್ಯಕ್ತಿನಾಮ, ಸಮುದಾಯ ಭವನ, ಚೌಕ ಮುಂತಾದವುಗಳು ಬೀದರನ ತುಂಬಾ ಕಡೆಗಳಲ್ಲಿ ಕಂಡು ಬರುತ್ತವೆ.

**ಬೊಮ್ಮಗೊಂಡೇಶ್ವರನ ವಚನಗಳು**[೧೪] :

ಬೊಮ್ಮಗೊಂಡೇಶ್ವರರು ಕೊಟ್ಟ ಕೊಡುಗೆಗಳನ್ನು ಗಮನಿಸುವ ಸಂದರ್ಭದಲ್ಲಿ ಅವರು ರಚಿಸಿದ ವಚನಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಏಕೆಂದರೆ ಈ ವಚನಗಳಲ್ಲಿ ಧರ್ಮ, ನ್ಯಾಯ, ನೀತಿಗಳೆಲ್ಲವೂ ಹುದುಗಿಕೊಂಡಿವೆ. ಜೊತೆ ಜೊತೆಗೆ ಹಿತನುಡಿಗಳನ್ನು ಆಡುವುದರ ಮೂಲಕ ಸಮಾಜವನ್ನು ಸನ್ಮಾರ್ಗದಲ್ಲಿ ನಡೆಸುವ ಪ್ರಯತ್ನವೂ ಇವುಗಳಲ್ಲಿ ಕಂಡು ಬರುತ್ತವೆ. ಈ ವಚನಗಳು ಸುಂದರವೂ ವಿಶಿಷ್ಟವೂ ಆಗಿವೆ. ಇವುಗಳಿಂದ ಬೊಮ್ಮಗೊಂಡೇಶ್ವರರ ವೈಯಕ್ತಿಕ ಆಲೋಚನೆಯನ್ನು ಅಳೆಯಲು ಸಹಾಯಕವಾಗಿ ನಿಲ್ಲುತ್ತವೆ.

ಬೊಮ್ಮಗೊಂಡೇಶ್ವರನಿಂದ ವಚನಗಳು ರಚಿಸಲ್ಪಟ್ಟವೇ? ಎನ್ನುವ ಪ್ರಶ್ನೆಗೆ ಗೆರೆ ಕೊರೆದು ಹೇಳುವಂತಹ ಉತ್ತರವಿಲ್ಲ. ಗೊಂಡ ಬುಡಕಟ್ಟಿನವರಾಗಿದ್ದ ಇವರು ಅಕ್ಷರಸ್ಥರಾಗಿದ್ದರೆನ್ನಲು ಆಧಾರಗಳು ಹುಡುಕಿಕೊಳ್ಳಬೇಕಾಗುತ್ತದೆ. ಅಲೆಮಾರಿಯಾಗಿದ್ದ ಗೊಂಡರಿಗೆ ಅಕ್ಷರ ಕಲಿಯುವ ವಾತಾವರಣವಿತ್ತು ಎಂದು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಅದು ೧೫ನೇ ಶತಮಾನದ ಸಂದರ್ಭದಲ್ಲಿ ಮಹತ್ವದ ಇನ್ನೊಂದು ವಿಷಯವೆಂದರೆ ಈ ವಚನಗಳ ಮೂಲ ಹಸ್ತಪ್ರತಿ ದೊರೆಯದೇ ಇರುವುದು ಇವು ಮೂಲತಃ ೧೯೬೦-೬೫ರ ಸಂದರ್ಭದಲ್ಲಿ ನಾಗಪ್ಪ ಚಿದ್ರಿ ಪೊಲೀಸ್ ಅವರಿಂದ ಸಂಗ್ರಹಿಸಲ್ಪಟ್ಟಿವೆ. ಗೊಂಡರನ್ನು ಸಂಘಟನೆ ಮಾಡಲೆಂದೇ ತಮ್ಮ ಇಡೀ ಜೀವನ ಸವೆಸಿರುವ ನಾಗಪ್ಪ ಚಿದ್ರಿಯವರು ಖುದ್ದಾಗಿ ಹಳ್ಳಿಹಳ್ಳಿಗೆ ತಿರುಗಾಡಿ ಹಿರಿಯರಿಂದ ಈ ವಚನಗಳು ಸಂಗ್ರಹಿಸಿದ್ದಾರೆ. ಇವು ಸದ್ಯದಲ್ಲಿ ಶಾಂತಲಿಂಗ ಸ್ವಾಮಿ ಲಾಡಗೇರಿ, ಬೀದರ ಅವರ ಹತ್ತಿರ ಎರಡು ನೂರಕ್ಕೂ ಹೆಚ್ಚು ವಚನಗಳು ಕೈಬರಹದಲ್ಲಿವೆ. ದುರದೃಷ್ಟವಶಾತ್ ಇಲ್ಲಿಯವರೆಗೆ ಯಾರೂ ಇವುಗಳನ್ನು ಪರಿಷ್ಕರಣೆ ಮಾಡುವ ಸಾಹಸಕ್ಕೆ ಹೋಗಿಲ್ಲ. ಇವು ಪರಿಷ್ಕರಣೆಕ್ಕೊಳಪಟ್ಟರೆ ಬೊಮ್ಮಗೊಂಡೇಶ್ವರನ ಕುರಿತಂತೆ ಇನ್ನೂ ಹೆಚ್ಚಿನ ಮಾಹಿತಿ ಸಿಕ್ಕಂತಾಗುತ್ತದೆ.

ಇವನಿಗೆ ಅಕ್ಷರ ಜ್ಞಾನವಿತ್ತೆ? ಎನ್ನುವ ಪ್ರಶ್ನೆ ಹಾಕಿಕೊಂಡಾಗ ಕೆಲವು ಅಂಶಗಳನ್ನು ಕಣ್ಣೆದುರಿಗೆ ತಂದುಕೊಳ್ಳಬೇಕಾಗುತ್ತದೆ. ಅವುಗಳೆಂದರೆ ಗೊಂಡರ ನಾಯಕ, ಧಾರ್ಮಿಕ, ಮನೋಭಾವ ಉಳ್ಳವನು, ತ್ರಿಕಾಲಜ್ಞಾನಿ, ಅಪ್ರತ್ಯಕ್ಷ ಗುರು ವೀರಸಂಗಯ್ಯಾ, ಶಿಷ್ಯ ಗಾಣಿಗರ ಸಿದ್ದಪ್ಪ, ಅರಸನೊಡನೆ ಮುಖಾಮುಖಿಯಾಗಿ ಆಡಿದ ಮಾತುಗಳು, ಅವನಿಂದ ಪಡೆದ ಹಕ್ಕುಗಳು ಇವು ಎಲ್ಲವುಗಳನ್ನು ಗಮನಿಸಿದಾಗ ಅವನಿಗೆ ಅಕ್ಷರಜ್ಞಾನವಿತ್ತು ಎಂಬುದು ಅಲ್ಲಗಳೆಯಲು ಸಾಧ್ಯವಾಗುವುದಿಲ್ಲ ಅಲ್ಲದೇ

---

**ಅಡಿ ಟಿಪ್ಪಣಿ :**

೧೪. ಅನುಬಂಧವನ್ನು ನೋಡಿ.

''ಇವನಿಗೆ ಕನ್ನಡ, ಮರಾಠಿ, ತೆಲುಗು ಭಾಷೆಯ ಜ್ಞಾನವಿತ್ತು, ಆಧ್ಯಾತ್ಮ ಮತ್ತು ತರ್ಕ ಜ್ಞಾನಿಗಳಾಗಿದ್ದರು.''[೧೫] ಜೊತೆ ಜೊತೆಗೆ ಬೊಮ್ಮಗೊಂಡೇಶ್ವರನ ಕಾಲ ಅತೀ ಪ್ರಾಚೀನ ಕಾಲವೇನಲ್ಲ, ಅದು ೧೫ನೇ ಶತಮಾನ, ಹೀಗಾಗಿ ಈತನಿಗೆ ಅಕ್ಷರ ಜ್ಞಾನವಿತ್ತು ಎಂಬುದು ಪಕ್ಕಕ್ಕೆ ಸರಿಸಿಡುವ ಮಾತಲ್ಲ.

ಈಗಾಗಲೇ ತನ್ನ ಹಿಂದೆ ಆಗಿ ಹೋಗಿರುವ ವಚನ ಕ್ರಾಂತಿಯ ಪ್ರಭಾವ ಈತನ ಮೇಲೆ ಆಗಿರಲು ಸಾಧ್ಯವಿದೆ. ಈತನ ವಚನದ ಅಂಕಿತದಲ್ಲಿ ಗುರು ವೀರಸಂಗಯ್ಯ ಮತ್ತು ಬಸವಣ್ಣ ಇಬ್ಬರ ಹೆಸರು ಕಂಡು ಬರುತ್ತವೆ. ಈ ವಚನಗಳು ಸ್ವತಃ ಬೊಮ್ಮಗೊಂಡೇಶ್ವರನೇ ರಚಿಸಿದ ಎನ್ನಲು ಆಧಾರಗಳಿಲ್ಲ. ಶಿಷ್ಯನಾದ ಗಾಣಿಗರ ಸಿದ್ದಪ್ಪನಿಂದ ಪ್ರಚಾರಗೊಡಿರಬೇಕು ಎನ್ನುವುದು ಊಹಿಸಿಕೊಳ್ಳಬಹುದು. ವಚನಗಳನ್ನು ಓದಿದಾಗ ಬಸವಾದಿ ಶರಣರ ವಚನಗಳು ಓದಿದಂತೆ ಭಾಸವಾಗುತ್ತವೆ. ಅದರಲ್ಲಿ ಹುದುಗಿಕೊಂಡಿರುವ ತತ್ವಗಳು ಒಂದೇ ತೆರನಾಗಿವೆ. ವಚನಗಳು ಪರಿಷ್ಕೃತಗೊಂಡು ಬೊಮ್ಮಗೊಂಡೇಶ್ವರನಿಂದಲೇ ರಚಿತಗೊಂಡಿವೆ ಎಂಬುದು ಸಾಬೀತಾದರೆ ಈ ವಚನಗಳಿಗೆ ಹೆಚ್ಚಿನ ಆದ್ಯತೆ ಸಿಕ್ಕಂತಾಗುತ್ತದೆ. ಕೆಲವು ವಚನಗಳು ಪಂಚಾಕ್ಷರಿ ಪುಣ್ಯಶೆಟ್ಟಿಯವರ ಸಂಪಾದನೆಯ 'ಶರಣ ಸೌರಭ' ಸ್ಮರಣ ಸಂಚಿಕೆ ಹಾಗೂ ಎಚ್.ಸಿ.ಶಿವಕುಮಾರವರ ಸಂಪಾದನೆಯ ಮಾಸಪತ್ರಿಕೆ 'ಕನಕ ಸ್ಪೂರ್ತಿ'ಯಲ್ಲಿ ಪ್ರಕಟಗೊಂಡಿವೆ. ಬೊಮ್ಮಗೊಂಡೇಶ್ವರನ ಈ ವಚನಗಳು ಹಳ್ಳಿ ಹಳ್ಳಿಗೆ ಹೋಗಿ ಸಂಗ್ರಹಿಸಿದ ದಿವಂಗತ ನಾಗಪ್ಪ ಚಿದ್ರಿಯವರು ನಮ್ಮ ನಡುವೆ ಇದ್ದರೆ ಇನ್ನೂ ಹೆಚ್ಚಿನ ಮಾಹಿತಿ ಪಡೆದುಕೊಳ್ಳಬಹುದಾಗಿತ್ತು. ಈ ವಚನಗಳನ್ನು ಕೈಬಿಟ್ಟು ಮುಂದೆ ಹೋಗುವಂತೆಯೂ ಇಲ್ಲ ಹಾಗಂತ ನೇರವಾಗಿ ಸ್ವೀಕರಿಸುವಂತೆಯೂ ಇಲ್ಲ.

ಬೊಮ್ಮಗೊಂಡೇಶ್ವರನ ವಚನಗಳ ವಿಷಯ ಕುರಿತು ಚರ್ಚಿಸಬೇಕೆಂದರೆ ಇದರಲ್ಲಿನ ವಿಷಯ ಮತ್ತು ಮಂಡಿಸುವ ಪರಿ ನಮಗೆ ಆಶ್ಚರ್ಯ ಮೂಡಿಸುತ್ತವೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು ಹತ್ತಿಡಬೇಕು ಎಂದು ತನ್ನ ಶಿಷ್ಯನಾದ ಗಾಣಿಗೇರ ಸಿದ್ದಪ್ಪನಿಗೆ ಹೇಳುತ್ತಾನೆ. ಗಾಣಿಗನು ಎಣ್ಣೆ ತೆಗೆಯುವ ಪರಿಯನ್ನು ಮನುಷ್ಯ ತನ್ನ ದುರ್ಗುಣವನ್ನು ತೆಗೆಯುವಲ್ಲಿ ಬಳಸಿಕೊಳ್ಳಬೇಕು ಎಂದು ಸಾಂಕೇತಿಕವಾಗಿ ತಿಳಿಸುತ್ತಾನೆ.

ಸಂಬೋಧನಾ ರೂಪದಲ್ಲಿರುವ ವಚನ ಹೀಗಿದೆ -

''ಎಲೇ ಗಾಣಿಗರ ಸಿದ್ದ, ಕಾಲೊಳಗೆ ಎಣ್ಣೆ
ಹಿಂಡ್ಹಿಡಿ ತೆಗೆಯುವಂತೆ
ಹಿಂಡಿ ತೆಗೆ ನೀ ದುರ್ಗುಣವ''

ಇದಲ್ಲದೆ ಬೊಮ್ಮಗೊಂಡೇಶ್ವರ ತನ್ನ ಹಾಗೂ ವೀರಸಂಗಯ್ಯನ ಕಾಲಕ್ಕೂ ಅಜಗಜಾಂತರ ವ್ಯತ್ಯಾಸವಿದ್ದರೂ ವೀರಸಂಗಯ್ಯನನ್ನು ತನ್ನ ಗುರು ಎಂಬುದಾಗಿ ತನ್ನ ವಚನಗಳಲ್ಲಿ ಹೇಳಿಕೊಂಡಿದ್ದಾನೆ. ಬೀದರನ ಒಳಕೋಟೆಯಲ್ಲಿರುವ ಬೊಮ್ಮಗೊಂಡನ ಕೆರೆ ಬಳಿ ವೀರಸಂಗಯ್ಯನ ದೇವಸ್ಥಾನವಿದೆ, ಬಹುಶಃ ಆ ದೇವಸ್ಥಾನ ಸೇವೆ ಬೊಮ್ಮಗೊಂಡನೇ ಮಾಡುತ್ತಿದ್ದಿರಬಹುದು.

---
ಅಡಿ ಟಪ್ಪಣಿ :

೧೫.. 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂ. ಎಚ್.ಸಿ.ಶಿವಕುಮಾರ, ಪು. ೧೩.

ಗುರುವಿನ ವ್ಯಕ್ತಿತ್ವ ಕುರಿತು ವಚನಗಳು ಹೀಗಿವೆ -

''ಪರುಷದ ಪುತ್ಥಳಿ ಪತಿತ ಪಾವನ ಮೂರ್ತಿ
ಶ್ರೀ ಗುರು ವೀರಸಂಗಯ್ಯನ ಶ್ರೀ ಪಾದಕ್ಕೆ
ನಮೋ ನಮೋ ಎಂದು ಬದುಕಿದೆನು ಬಸವಣ್ಣ''

''ಶ್ರೀ ಗುರುವೆ ಗುರುವೆ ಗುರುವೆ
ಕಲ್ಪ ತರುವೆ ತರುವೆ
ಕರುಣಾ ಸಾಗರವೆ ಸಾಗರವೆ
ಮುಕ್ತಿದಾಗರವೆ ಆಗರವೆ
ಭವಹರ ಭಯಹರ ಶಿವಹರ
ಶ್ರೀ ಗುರು ವೀರಸಂಗಯ್ಯ ನೀನೊಲಿದು
ಸಲಹೋ ಬಸವಣ್ಣಾ''

''ನಿಮ್ಮ ಪಾದವ ಹುಡುಕುತ ಬಂದು
ನಿಮ್ಮ ದಿವ್ಯ ಶ್ರೀ ಪಾದವ ಕಂಡು
ಶ್ರೀ ಗುರು ವೀರಸಂಗಯ್ಯನಲ್ಲಿ
ನಮೋ ನಮೋ ಎಂದೆನು ಬಸವಣ್ಣಾ''

ಎನ್ನುವಲ್ಲಿ ಬೊಮ್ಮಗೊಂಡೇಶ್ವರನ ಗುರುವಿನಲ್ಲಿ ತಳೆದ ಭಾವನೆ ಎಂತಹದ ಎಂದು ಗೊತ್ತಾಗುತ್ತದೆ. ತಾ ಮಾಡುವ ಕಾಯಕ ಕುರಿತು ಹೇಳುತ್ತಾರೆ. ಕಾಯಕ ಮಾಡುತ್ತ ಎಲ್ಲೆಡೆ ಪರಮಾತ್ಮನನ್ನು ಕಂಡಿರುವುದಾಗಿ ವಚನವೊಂದರಲ್ಲಿ ಹೀಗೆ ಹೇಳಿದ್ದಾನೆ -

ಹರ್ ಹರ್ ಎನ್ನುತ್ತ ಮರಗಳು ಬಡಿದು
ಕುರಿಗಳು ಕಾಯುವುದೆನ್ನ ಕಾಯಕ
ಕುರಿತಳಲ್ಲಿ ಹರಹರ ಕುರಿ ಕಾಯುವವರಲ್ಲಿ ಹರಹರ
ಮರದಲ್ಲಿ ಹರಹರ ಮರದಡಿಯಲ್ಲಿ ಹರಹರ
ಗುರು ವೀರಸಂಗಯ್ಯ ನಿಮ್ಮ ಚರಣವ ಪಿಡಿದು
ಸರ್ವರೊಳ ಹರನ ಕಂಡೆನಯ್ಯ ಬಸವಣ್ಣ

ಎಂದು ಹೇಳುವಲ್ಲಿ ಕಾಯಕದಲ್ಲಿ ಕೈಲಾಸವನ್ನು ಕಂಡಿರುವುದಾಗಿ ತಿಳಿಸುತ್ತಾನೆ. ಜೊತೆಗೆ ಕುರಿ-ಹೋತಗಳನ್ನು ಸಾಂಕೇತಿಕವಾಗಿ ಬಳಸಿಕೊಂಡು ಹಿತನುಡಿಗಳನ್ನು ಹೀಗೆ ಹೇಳುತ್ತಾನೆ. 'ಹೊತಿನ ಸಂಗವಿಡಿದು ಹೊತವಾಗಲೂ ಬೇಡ ಓತು ಗುರುವಿಗೆ ಶರಣಾಗು', 'ಸಂಸಾರವೆಂಬ ಬೇಲಿಯನೆ ಬಡಿಯುತ್ತ ಕಾಲನ ಕೆಡಹಲು ಕೋಲು ಹಿಡಿದೆನಣ್ಣ' ಎನ್ನುವಲ್ಲಿ ತಾನು ಕೋಲು ಹಿಡಿದ ನಿಜಮರ್ಮವನ್ನು ತಿಳಿಸುತ್ತಾನೆ. ಕೆಲವೊಮ್ಮೆ 'ಕುರಿಯ ಕಾಯೋ ಶಿವ ಶಿವ, ಕುರಿಯ ಮರಿಯ ಕಾಯೋ ಶಿವ ಶಿವ, ಕುರುಬನ ಕಾಯೋ ಶಿವ ಶಿವ' ಎನ್ನುವಲ್ಲಿ ತನ್ನ ಕುಲದವರನ್ನು ಕಾಪಾಡು ಎಂದು ಶಿವನಲ್ಲಿ ಮೊರೆ ಇಟ್ಟಿದ್ದಾನೆ.

ಇವನ ವಚನಗಳು ಒಗಟಿನ ರೂಪದಲ್ಲಿ ಇದ್ದದ್ದು ಕಂಡು ಬರುತ್ತವೆ. ಒಬ್ಬ ಕುರಿಗಾಹಿಯ ಒಟ್ಟು ಚಿತ್ರಣವನ್ನು ಅನೇಕ ವಚನಗಳಲ್ಲಿ ಚಿತ್ರಿಸಿದ್ದಾನೆ.

''ಹತ್ತು ಮರಿಯನು ಕೊಟ್ಟು
ಒಂದು ಬಲೆಯನು ಕೊಂಡೆನಣ್ಣಾ
ಎಂಟು ಕುರಿಯನು ಕೊಟ್ಟು
ಒಂದು ಬೆತ್ತವ ಕೊಂಡೆನಣ್ಣಾ
ಆರು ಟಗರವ ಕೊಟ್ಟು
ಒಂದು ತೋಳವ ಕೊಂಡೆನಣ್ಣಾ
ಮೂರು ಹೊತವ ಕೊಟ್ಟು
ಮೂಗುದಾಣಿಯ ಕೊಂಡೆನಣ್ಣಾ
ನಾನೇನು ಮಾಡಲಿ ನಾ ಮಾಡುವ ಕೆಲಸ
ತಾನೆ ಮಾಡಿಕೊಂಡವು
ನಾನು ಶ್ರೀ ಗುರುವೀರಸಂಗಯ್ಯನ ಕೃಪೆಯಿಂದ
ಸುಮ್ಮನಾಗಿರ್ದೆನು ಬಸವಣ್ಣಾ

ಒಟ್ಟಾರೆಯಾಗಿ ಬೊಮ್ಮಗೊಂಡೇಶ್ವರನ ವಚನಗಳು ವಿಶಿಷ್ಟವಾದವುಗಳಾಗಿವೆ. ಆದರೆ ಇವುಗಳು ಪರಿಷ್ಕರಣೆಯಾಗದೆ ಇರುವುದು ವಿಷಾದನೀಯ. ಪರಿಷ್ಕರಣೆಗೊಂಡು ಪ್ರಕಟಗೊಂಡರೆ ಬೊಮ್ಮಗೊಂಡೇಶ್ವರನು ಒಬ್ಬ ವಚನಕಾರ ಎಂದು ಪರಿಗಣಿಸುವ ಮೂಲಕ ಆ ಸಾಲಿನಲ್ಲಿ ನಿಲ್ಲಿಸಬಹುದಾಗಿದೆ.

**ಬೊಮ್ಮಗೊಂಡೇಶ್ವರನು ಜನಪದರ ಮೇಲೆ ಮಾಡಿದ ಪ್ರಭಾವ :**

ಬೊಮ್ಮಗೊಂಡೇಶ್ವರನು ಬೀದರ ಜಿಲ್ಲೆಯ ಜನಪದರ ಮೇಲೆ ವಿಶೇಷ ಪ್ರಭಾವ ಬೀರಿದ್ದು ಕಂಡು ಬರುತ್ತದೆ. ಅದರಲ್ಲೂ ಗೊಂಡರ ಮೇಲೆ ಇವರ ಪ್ರಭಾವ ಅಪಾರ. ಇಲ್ಲಿ ಹೆಜ್ಜೆ ಹೆಜ್ಜೆಗೆ ಕಂಡು ಬರುವ ಮೂರ್ತಿಗಳು, ದೇವಾಲಯಗಳು ಈ ಮಾತಿಗೆ ಸಾಕ್ಷಿಯಾಗಿವೆ. ಯಾವುದೇ ಬುಡಕಟ್ಟುಗಳಲ್ಲಿ ಆಗಿ ಹೋದ ಮಹತ್ ವ್ಯಕ್ತಿಗಳ ಕುರಿತು ದಾಖಲೆಗಳು ನಿರ್ಮಾಣಗೊಳ್ಳುವುದಿಲ್ಲವೆಂದಲ್ಲ, ನಿರ್ಮಾಣಗೊಳ್ಳುತ್ತವೆ. ಆದರೆ ಅವು ಲಿಖಿತವಾಗಿರದೇ ಮೌಖಿಕವಾಗಿರುತ್ತವೆ. ಸಮುದಾಯವೊಂದು ತನ್ನೆದುರಿಗೆ ನಡೆದ ಮಹತ್ವದ ಘಟನೆಗಳನ್ನು ಮುಂದಿನ ಪೀಳಿಗೆಗೆ ರವಾನಿಸುವ ಕಾರ್ಯ ಮಾಡುತ್ತವೆ. ಇದು ಯಾವಾಗ ಸಾಧ್ಯವಾಗುವುದೆಂದರೆ ವ್ಯಕ್ತಿಯೊಬ್ಬ ಅಥವಾ ಘಟನೆಯೊಂದು ಆ ಸಮುದಾಯದ ಮೇಲೆ ವಿಶಿಷ್ಟ ಪ್ರಭಾವ ಬೀರಿರಬೇಕು. ಆ ಪ್ರಭಾವವು ಗಟ್ಟಿಯಾಗಿರಬೇಕು. ಅಂದರೆ ವ್ಯಕ್ತಿಯೊಬ್ಬ ದೇವರಾಗುವ ಬಗೆ ಗಮನಿಸಿದಾಗ ಅದು ಸಾಮಾನ್ಯವಾಗಿರುವುದಿಲ್ಲ. ಅದರಲ್ಲೂ ಬುಡಕಟ್ಟುಗಳು ಪ್ರತ್ಯೇಕ ಜೀವನ ನಡೆಸುತ್ತಿರುತ್ತವೆ. ನಾಗರಿಕ ಸಮಾಜದಿಂದ ಪೂರ್ತಿ ಬೇರೆಯಾಗಿಯೂ ಅಥವಾ ಪೂರ್ತಿ ಒಂದಾಗಿಯೂ ಬದುಕುವುದಿಲ್ಲ. ಸಮಾಜದ ಇತರ ಜನರಲ್ಲಿ ಒಂದಾಗಿ ಬಾಳಿದರೂ ಅವರದೇ ಆದ

ಪ್ರತೀಕ ಬದುಕನ್ನು ಬದುಕುತ್ತಿರುತ್ತಾರೆ. ಅಂತಹ ಸಂದರ್ಭದಲ್ಲಿ ತಮ್ಮಲ್ಲಿ ನಡೆದು ಹೋದ ಮಹತ್ ಘಟನೆಗಳು, ಮಹಾನ್ ವ್ಯಕ್ತಿಗಳ ಕುರಿತು ದಾಖಲಿಸುವ ಕೆಲಸ ನಡೆದಿರುವುದಿಲ್ಲ. ಬೊಮ್ಮಗೊಂಡೇಶ್ವರನ ಸಂದರ್ಭದಲ್ಲೂ ಆದದ್ದು ಇದೇ. ಗೊಂಡ ಬುಡಕಟ್ಟಿನ ಜನಪದರು ಈತನ ಚರಿತ್ರೆಯನ್ನು ದಾಖಲು ಮಾಡಿಕೊಳ್ಳಲು ಪ್ರಯತ್ನ ಪಡಲಿಲ್ಲ. ಅದಕ್ಕೆ ಆಸ್ಪದವೂ ಇರಲಿಲ್ಲ ಆದರೆ ಪ್ರಭಾವಿ ವ್ಯಕ್ತಿತ್ವದ ಪ್ರಭಾವ ಎಷ್ಟು ಶಕ್ತಿಶಾಲಿಯಾಗಿರುತ್ತದೆಂದರೆ, ಬುಡಕಟ್ಟು ಜನಾಂಗವೂ ಆ ಕುರಿತು ದಾಖಲಿಸುವ ಕಾರ್ಯ ಮಾಡಿ ತೋರಿಸುತ್ತದೆ. ಹಿಂದೆ ಹೇಳಿದಂತೆ ಅದು ಲಿಖಿತವಾಗಿರದೇ ಮೌಖಿಕವಾಗಿರುತ್ತವೆ. ಬೊಮ್ಮಗೊಂಡೇಶ್ವರನು ಗೊಂಡ ಅಥವಾ ಇತರ ಜನಪದ ವರ್ಗದವರ ಮೇಲೆ ಮಾಡಿದ ಪ್ರಭಾವದಿಂದಲೇ ಇಂದು ಆತನ ಕುರಿತಂತೆ ಕಥೆ, ಹಾಡು, ಐತಿಹ್ಯ, ಪವಾಡಗಳು ಸಿಗುತ್ತವೆ. ದೇವಾಲಯಗಳು, ಮೂರ್ತಿಗಳು, ಪೂಜೆ, ಉತ್ಸವ, ಜಾತ್ರೆ ಅನ್ನಸಂತರ್ಪಣೆ ಎಲ್ಲವೂ ಆತನ ಪ್ರಭಾವದ ಅಡಿಯಲ್ಲಿ ನಡೆಯುವಂಥವುಗಳು.

ಬೊಮ್ಮಗೊಂಡೇಶ್ವರನೆಂಬ ಹೆಸರಿನ ಅಡಿಯಲ್ಲಿಯೇ ಆತನು ಜನಪದರ ಮೇಲೆ ಮಾಡಿದ ಪ್ರಭಾವವನ್ನು ಗುರುತಿಸಬಹುದಾಗಿದೆ. 'ದೇವರಂಥ ಕೆಲಸ ಮಾಡಿದವನು ದೇವರೇ ಆಗಿರುತ್ತಾನೆ' ಎನ್ನುವ ಮಾತು ಇಲ್ಲಿ ಸ್ಮರಿಸಿಕೊಳ್ಳಬಹುದು. ಬೊಮ್ಮಗೊಂಡ ಎನ್ನುವ ಸಹಜ ನಾಮಪದವನ್ನು ಈಶ್ವರ ಎನ್ನುವ ವಿಶೇಷತೆಯ ಜೊತೆಗೆ ಗುರುತಿಸಿಕೊಳ್ಳುವುದು ನೋಡಿದರೆ ಬೊಮ್ಮಗೊಂಡ ಜನಪದರ ಮೇಲೆ ಮಾಡಿದ ಪ್ರಭಾವ ಅರಿವಿಗೆ ಬರುತ್ತದೆ. ಕೇವಲ ಬೊಮ್ಮಗೊಂಡನಾಗಿದ್ದ ಒಬ್ಬ ವ್ಯಕ್ತಿ ಮಹಾತ್ಮ ಬೊಮ್ಮಗೊಂಡೇಶ್ವರನೆಂದು ಕರೆಸಿಕೊಳ್ಳಬೇಕಾದರೆ ಆತನ ಪ್ರಭಾವವು ಎಷ್ಟಿರಬಹುದು! ಬಡವರ, ಅಶಕ್ತರ, ಹಳ್ಳಿಗರ, ರೈತರ, ಪ್ರಾಣಿ -ಪಕ್ಷಿಗಳ, ಮಾನವ-ಜನಾಂಗಕ್ಕಾಗಿ ತನ್ನ ಸೀಮಿತ ಗಡಿಯೊಳಗೆ ಶ್ರಮಿಸಿದ ಬೊಮ್ಮಗೊಂಡೇಶ್ವರನು ಅವರೆಲ್ಲರಿಗೂ ಹತ್ತಿರನಾಗಿರುವುದು ಆಶ್ಚರ್ಯವೇನಿಲ್ಲ. ಸರಳ ಜೀವನ ಶೈಲಿ, ಉದಾರ ವಿಚಾರಗಳು ವ್ಯಕ್ತಿಯ ನಾಮಗಳಿಗೆ ಈಶ್ವರನ ನಾಮಗಳು ಹತ್ತಿಕೊಳ್ಳುವುದು ಸಾಮಾನ್ಯ ಸಂಗತಿ. ಬಸವಣ್ಣ-ಬಸವೇಶ್ವರರಾದದ್ದು, ಬೀರಪ್ಪ-ಬೀರಲಿಂಗೇಶ್ವರರಾದದ್ದು, ಮೈಲಾರ-ಮೈಲಾರಲಿಂಗೇಶ್ವರರಾದದ್ದು, ಭಾಲ್ಕಿ ಚನ್ನಬಸವರು - ಚನ್ನಬಸವ ಪಟ್ಟದ್ದೇವ (ನಡೆದಾಡುವ ದೇವರು) ರಾದದ್ದು ಈ ಹಿನ್ನೆಲೆಯಲ್ಲಿಯೇ ಎನಿಸುತ್ತದೆ. ವ್ಯಕ್ತಿತ್ವವೊಂದರ ಪ್ರಭಾವವು ಜನರ ಮೇಲೆ ಆದಾಗ ಅದರ ಪ್ರತಿಕ್ರಿಯೆ ಎಂಬಂತೆ ಸಮಾಜದಲ್ಲಿ ಪರಿವರ್ತನೆಗಳಾಗುತ್ತವೆ. ಅವು ಮುಂದೆ ಪರಂಪರೆ ಎಂಬಂತೆ ರೂಢಿಯಲ್ಲಿ ಬಳಕೆಗೊಳ್ಳುತ್ತವೆ. ಬೊಮ್ಮಗೊಂಡೇಶ್ವರನ ವಿಷಯದಲ್ಲಾದದ್ದು ಇದೇ.

ಬೊಮ್ಮಗೊಂಡೇಶ್ವರ ಒಬ್ಬ ಕುರಿಗಾಯಿ. ಗೊಂಡರ ನಾಯಕನಾಗಿ ಅವರ ರಕ್ಷಣೆ ಹೊಣೆ ಹೊತ್ತವನು. ತನ್ನಂತೆ ಕುರಿಕಾಯುವವರನ್ನು ಜೊತೆಯಲ್ಲಿಟ್ಟುಕೊಂಡು ಅಲೆಮಾರಿಯಂತೆ ಜೀವನ ನಡೆಸುತ್ತಿರಬಹುದು. ಇಂಥಹ ಸಂದರ್ಭದಲ್ಲಿ ದುಷ್ಟ ಪ್ರಾಣಿಗಳಿಂದ, ಸಮಾಜದ ಇತರ ವರ್ಗಗಳಿಂದ ತೊಂದರೆಯಾದಾಗ ಅವರಿಂದ ರಕ್ಷಣೆ ಕೊಡುವುದು ನಾಯಕನಾದ ಬೊಮ್ಮಗೊಂಡೇಶ್ವರನ ಮುಖ್ಯ ಹೊಣೆಯಾಗಿದ್ದಿರುವುದು ಸಹಜ. ತನ್ನ ಹೊಣೆಯನ್ನು ಸಮರ್ಥವಾಗಿ ನಿಭಾಯಿಸುವುದರ ಮೂಲಕ ತಮ್ಮ ಜನರ ಮನ್ನಣೆಗೆ ಪಾತ್ರರಾಗಿದ್ದಾರೆ. ಈತನ ಪ್ರಭಾವ ಗೊಂಡರ ಮೇಲೆ ಎಷ್ಟಿದೆ ಎಂದರೆ ಆತ

ಒಬ್ಬ ವ್ಯಕ್ತಿ ಎಂಬುದನ್ನು ಮರೆತು ದೈವೀ ಪುರುಷನನ್ನಾಗಿ ಮಾಡಿದ್ದಾರೆ. ತನ್ನ ಜವಾಬ್ದಾರಿಯನ್ನು ನಿಭಾಯಿಸುವಾಗ ಅನೇಕ ತೊಂದರೆಗಳನ್ನು ಎದುರಿಸಿದ್ದಾನೆ ಆ ತೊಂದರೆಗಳನ್ನು ಎದುರಿಸುವಾಗ ಬಳಸಿಕೊಂಡ ಚಾಣಾಕ್ಷತನ ಆತನನ್ನು ದೈವೀಕರಿಸುವಲ್ಲಿ ಸಹಕಾರಿಯಾಗಿವೆ. ವ್ಯಕ್ತಿಯೊಬ್ಬನ ವೀರತ್ವ ದೈವತ್ವಕ್ಕೇರುವುದು ಸಹಜ. ಇದೂ ನಮ್ಮ ಸಂಸ್ಕೃತಿಯ ಒಂದು ಭಾಗ. ಅದಕ್ಕಾಗಿಯೇ ಇಂದು ಅಸಂಖ್ಯಾತ ವೀರಗಲ್ಲುಗಳು ಕಂಡು ಬರುತ್ತವೆ ಮತ್ತು ಪೂಜೆಗೊಳ್ಳಲ್ಪಡುತ್ತವೆ. ಅತೀ ಮರ್ಯಾದೆಯಿಂದ ಬಾಳಿದ ಹಿರಿಯರ ನೆನಪಿಗಾಗಿ ಕಲ್ಲೊಂದು ನೆಟ್ಟು ಅದನ್ನು ಪೂಜಿಸುವ ರೂಢಿಯನ್ನು ಹಾಕಿಕೊಳ್ಳುತ್ತಾರೆ. ಇದರಿಂದ ಒಂದು ಅಂಶ ನಿಶ್ಚಿತವಾಗಿ ಗೊತ್ತಾಗುತ್ತದೆ, ಹಿಂದಿನ ಸಮಾಜಗಳು, ಸಮೂದಾಯಗಳು ಸಮಾಜದ ಹಿತಚಿಂತಕರಿಗೆ, ವಿಶಿಷ್ಟ್ಯ ಪ್ರಾವಿಣ್ಯವುಳ್ಳವರಿಗೆ ಸುಲಭವಾಗಿ ಮರೆಯಲಾಗುವುದಿಲ್ಲ. ಅವರನ್ನು ಯಾವ ರೂಪದಲ್ಲಾದರೂ ಜೀವಂತವಿರಿಸಲು ಪ್ರಯತ್ನಿಸುತ್ತಾರೆ. ಅಷ್ಟೊಂದು ವ್ಯಕ್ತಿಯೊಬ್ಬನಿಂದ ಸಮಾಜ ಪ್ರಭಾವಿಯಾಗಿರುತ್ತದೆ ಇದೇ ರೀತಿಯಾಗಿ ಬೊಮ್ಮಗೊಂಡೇಶ್ವರನು ಗೊಂಡ ಬುಡಕಟ್ಟಿನ ಮೇಲೆ ಸ್ವಲ್ಪ ಮಟ್ಟಿಗೆ ಇತರ ಸಮಾಜದ ಮೇಲೂ ಪ್ರಭಾವ ಬೀರಿದ್ದಾನೆ. ಇವರ ಪ್ರಭಾವ ಪ್ರಾರಂಭದ ವೇಳೆಯಲ್ಲಿ ಹೇಗಿತ್ತು ಎಂಬುದು ಊಹಿಸಿಕೊಳ್ಳುವುದರ ಕಠಿಣ. ಒಂದು ಸಮಾಜ ವ್ಯಕ್ತಿಯೊಬ್ಬನಿಂದ ಪ್ರಭಾವಗೊಂಡರೂ ಮುಂದೆ ಕ್ಷೀಣಿಸಲೂಬಹುದು ಅಥವಾ ಹೆಚ್ಚಲೂಬಹುದು.

ಬೊಮ್ಮಗೊಂಡೇಶ್ವರ ಪ್ರಭಾವ ಇಡೀ ಬೀದರ ಜಿಲ್ಲೆಯ ಜನಪದರ ಮೇಲೆ ಆಗಿದೆಯೂ ಎನ್ನುವಂತಿಲ್ಲ ಆಗದೇ ಇಲ್ಲ ಎನ್ನುವಂತೂ ಇಲ್ಲ. ಆದರೆ ಗೊಂಡ ಬುಡಕಟ್ಟಿನವರ ಮೇಲೆ ಖಂಡಿತವಾಗಿ ಪ್ರಭಾವ ಬೀರಿರುವುದು ಗಮನಿಸಬಹುದು. ಏಕೆಂದರೆ ಇತರ ದೇವಾಲಯ ಕಟ್ಟಿರುವುದು ಗೊಂಡರು ಮಾತ್ರ. ಮೂರ್ತಿಗಳನ್ನು ಗೊಂಡರ ಜನಸಂಖ್ಯೆ ಹೆಚ್ಚಿರುವಲ್ಲಿ ಗೊಂಡರೇ ಸ್ಥಾಪಿಸಿರುವುದು. ಆದರೆ ಬೊಮ್ಮಗೊಂಡೇಶ್ವರ ಕುರಿತ ಕಥೆ, ಐತಿಹ್ಯ, ಪವಾಡಗಳು ಮಾತ್ರ ಸಮಾಜದ ಎಲ್ಲ ವರ್ಗದವರು ಹೇಳುತ್ತಾರೆ. ಆತನ ಚರಿತ್ರೆ ಎಲ್ಲರೂ ಅರಿತಿರುತ್ತಾರೆ. ಮುಖ್ಯವಾಗಿ ಬೀದರ ತಾಲೂಕಿಗೆ ಸಂಬಂಧ ಪಟ್ಟ ಗ್ರಾಮಗಳಲ್ಲಿ ಈತನ ಪ್ರಭಾವ ಹೆಚ್ಚಾಗಿದ್ದುದು ಗಮನಿಸಬಹುದು. ಸಮಾಜದ ಎಲ್ಲಾ ಜನರ ಮೇಲೆ ಪ್ರಭಾವ ಬೀರಿದ್ದರೂ ಆತನನ್ನು ಅಪ್ಪಿಕೊಂಡಿದ್ದು ಗೊಂಡ ಬುಡಕಟ್ಟಿನವರೇ. ಸಮಾಜದ ಇತರ ವರ್ಗದ ಜನರು ಇದಕ್ಕೆ ಆಕ್ಷೇಪ ವ್ಯಕ್ತಪಡಿಸುತ್ತಾರೆ. ಕಾರಣ ''ಗೊಂಡ ಜನಾಂಗದವರು ಬೊಮ್ಮಗೊಂಡೇಶ್ವರನನ್ನು ತಮಗೆ ಮಾತ್ರ ಸೀಮಿತಗೊಳಿಸಿಕೊಂಡಿದ್ದಾರೆಯೇ ವಿನಹ ಆತನನ್ನು ಸಾರ್ವತ್ರಿಕರಣಗೊಳಿಸಲಿಲ್ಲ''[೧೬] ಎನ್ನುತ್ತಾರೆ. ಈ ಮಾತು ಒಂದು ದೃಷ್ಟಿಯಿಂದ ನಿಜವೂ ಆಗಿದೆ. ಮಾನವೀಯ ತತ್ವಗಳಾಗಲಿ, ವ್ಯಕ್ತಿಗಳಾಗಲಿ ಸೀತದೊಳಗೆ ಸಂಚರಿಸಕೂಡದು. ಅದಕ್ಕೆ ಯಾವುದೇ ಬಂಧನಗಳಿರಕೂಡದು. ಆದರೆ ಇಂದಿನ ಸಮಾಜದಲ್ಲಿ ಸರ್ವೇಸಾಮಾನ್ಯವಾಗಿ ಮಹಾತ್ಮರಿಗೆ ಚೈತನ್ಯ ಶಕ್ತಿಗಳಿಗೆ ಒಂದು ಗುಡಿಯಲ್ಲಿ ಕೂಡಿಸಿಬಿಟ್ಟಿದ್ದೇವೆ. ಉದಾಹರಣೆಗಾಗಿ ಶರಣರನ್ನೇ ತೆಗೆದುಕೊಳ್ಳಬಹುದು. ೧೨ನೇ ಶತಮಾನದಲ್ಲಿ ಆಗಿ ಹೋದಂತಹ ಬಸವಾದಿ ಶರಣರು ಒಂದೇ ತತ್ವವನ್ನು ಪ್ರತಿಪಾದಿಸಿದರು. ಆದರೆ ಇಂದು ಒಬ್ಬೊಬ್ಬ ಶರಣ ಒಂದೊಂದು ಜಾತಿಯ

---

**ಅಡಿ ಟಿಪ್ಪಣಿ :**

೧೬. ಶಾಂತಲಿಂಗ ಸ್ವಾಮಿ ಲಾಡಗೇರಿ (೬೨) ಬೀದರ

ಪ್ರತಿನಿಧಿಯಾಗಿ ನಿಲ್ಲಿಸಿದ್ದು ನೋಡಬಹುದು. ಲಿಂಗಾಯತರು ಬಸವಣ್ಣನನ್ನು, ಮಡಿವಾಳರು ಮಾಚಯ್ಯನನ್ನು, ಸಮಗಾರರು ಹರಳಯ್ಯನನ್ನು ಹೀಗೆ ಒಬ್ಬೊಬ್ಬ ಶರಣನನ್ನು ಒಂದೊಂದು ಜಾತಿಗೆ ಪ್ರತಿನಿಧಿಯನ್ನಾಗಿ ಮಾಡಿಕೊಂಡಿದ್ದಾರೆ.

ಯಾವ ಸಮಾಜದಲ್ಲಿ ಜಾತಿಯತೆಯನ್ನು ಕಿತ್ತುಹಾಕಬೇಕೆಂದು ಬಯಸಿದರೊ ಅದೇ ಜಾತಿಯಿಂದ ಅವರನ್ನು ಬಂಧಿಸಲು ಪ್ರಯತ್ನಿಸಿದ್ದು ವಿಪರ್ಯಾಸವೆನಿಸುತ್ತದೆ. ಬೊಮ್ಮಗೊಂಡೇಶ್ವರನನ್ನು ಕೂಡ ಒಂದು ಬುಡಕಟ್ಟಿಗೆ ಅಥವಾ ಒಂದು ಜನಾಂಗಕ್ಕೆ ಸಿಮೀತಗೊಳಿಸಿದರೆ ಆತನ ಒಟ್ಟು ಮಾನವೀಯ ಗುಣಕ್ಕೆ ಪೆಟ್ಟು ಬಿದ್ದಂತಾಗುತ್ತದೆ. ಅದಕ್ಕೆ ಇತರ ವರ್ಗದ ಜನರು ಈ ಕುರಿತು ಆಕ್ಷೇಪ ವ್ಯಕ್ತಪಡಿಸುತ್ತಾರೆ. ಇವರು ಕೇವಲ ಒಂದೇ ಬುಡಕಟ್ಟಿನವರಿಗೆ ಸೀಮೀತದಲ್ಲಿ ಪ್ರಭಾವ ಬೀರಿದ್ದಾರೆ ಎಂದು ಹೇಳಿದರೆ ತಪ್ಪಾಗುತ್ತದೆ. ಅವರು ಮಾನವೀಯ ಗುಣಗಳಿಂದ ಎಲ್ಲಾ ವರ್ಗದವರ ಮೇಲೆ ಪ್ರಭಾವ ಬೀರಿದ್ದಾರೆ. ಈ ಮಾತಿಗೆ ಸಾಕ್ಷಿಯಾಗಿ ಸಮಾಜದ ಇತರ ವರ್ಗದವರು ಬೊಮ್ಮಗೊಂಡೇಶ್ವರನನ್ನು ಸೀಮಿತ ಅರ್ಥದಲ್ಲಿ ಬಂಧಿಸುವ ಕುರಿತ ಆಕ್ಷೇಪವನ್ನು, ಅವರ ಕುರಿತು ಗೌರವ ಮಾತುಗಳನ್ನು ಜೊತೆಗೆ, ಮೂರ್ತಿಗಳನ್ನು ಸ್ಥಾಪಿಸಲು ಅನುಮತಿ ಕೊಟ್ಟಿರುವುದನ್ನು (ಕೆಲವು ಕಡೆ ಹೊರತು ಪಡಿಸಿ) ನೋಡಬಹುದು.

ನಮ್ಮ ಸಮಾಜ ಅಥವಾ ಭಾರತ ದೇಶ ಜಾತಿ ಪ್ರಧಾನವಾದ ದೇಶವಾದ್ದರಿಂದ ಜಾತಿಯನ್ನು ಎಷ್ಟೇ ಕಿತ್ತೆಸೆದರೂ ಅದು ಅಷ್ಟೇ ನೆಲೆಯೂರಿ ನಿಲ್ಲುತ್ತದೆ. ಬೊಮ್ಮಗೊಂಡೇಶ್ವರನು ನಿಜವಾಗಿಯೂ ಇಡೀ ಮಾನವ ಕುಲದ ದೇವತಾ ಸ್ವರೂಪರಾಗಿದ್ದರೂ ಜಾತ್ಯಾಂಧತೆಯಿಂದಲೋ, ಧರ್ಮಾಂಧತೆಯಿಂದಲೋ ಇವರು ಕೇವಲ ಗೊಂಡರ ಅಭಿಮಾನಕ್ಕೆ ಕಾರಣನಾಗಿದ್ದಾನೆ. ಈ ಅಭಿಮಾನ ಅವರನ್ನು ದೈವೀಕರಿಸುವಲ್ಲಿ ಸಹಕರಿಸಿದೆ. ಬುಡಕಟ್ಟುವೊಂದರ ಮುಗ್ಧ ಮನಸ್ಸುಗಳು ಅವರ ಮಾನವ ರೂಪವನ್ನು ದೈವ ರೂಪ ಪಡೆವಂತೆ ಮಾಡಿದೆ. ವ್ಯಕ್ತಿಯ ವೀರತ್ವವನ್ನು ದೈವತ್ವಕ್ಕೇರಿಸುವ ನಮ್ಮ ಸಮಾಜ ಬೊಮ್ಮಬೊಂಡೇಶ್ವರನ ಅತಿಯಾದ ಪ್ರಭಾವ ಅವರನ್ನು ದೈವೀಕರಿಸುವಲ್ಲಿ ಪ್ರಯತ್ನ ಪಡುತ್ತಿರುವುದು ಕಂಡು ಬರುತ್ತದೆ.

**ಬೊಮ್ಮಗೊಂಡೇಶ್ವರನನ್ನು ದೈವೀಕರಿಸುವ ಪ್ರಯತ್ನ :**

ಬೊಮ್ಮಗೊಂಡೇಶ್ವರನನ್ನು ಪಾರಂಪರಿಕವಾಗಿ ಪೂಜಿಸಿಕೊಂಡು ಅಥವಾ ಆರಾಧಿಸಿಕೊಂಡು ಬಂದಂತೆ ತೋರುವುದಿಲ್ಲ. ಇತ್ತೀಚಿಗೆ ಈ ರೂಢಿ ಗೊಂಡ ಬುಡಕಟ್ಟಿನವರು ಬೆಳೆಸಿಕೊಂಡು ಬಂದದ್ದು ಸ್ಪಷ್ಟವಾಗಿ ಗೋಚರಿಸುತ್ತದೆ. ಇಲ್ಲಿ ಕಂಡು ಬರುವ ದೇವಾಲಯ ತೀರ ಹಳೆಯದವುಗಳಾಗಿರದೆ ಎಂಬತ್ತರ ದಶಕದಿಂದ ನಿರ್ಮಾಣಗೊಂಡವುಗಳಾಗಿವೆ. ಅಲ್ಲಿ ನಡೆಯುವ ಧಾರ್ಮಿಕ ವಿಧಿ-ವಿಧಾನಗಳು ವಿಶೇಷ ಅಥವಾ ವಿಶಿಷ್ಟವಾದವುಗಳೇನಲ್ಲ. ಅಲ್ಲಿನ ಆಚರಣೆಗಳು ಹಿಂದಿನಿಂದ ನಡೆದುಕೊಂಡು ಬಂದಂಥವುಗಳಲ್ಲ. ಊರ ಜನರು ತಮಗೆ ತಿಳಿದಂತೆ, ಜಾತ್ರೆ, ಉತ್ಸವ, ಪೂಜೆ, ಅನ್ನ ಸಂತರ್ಪಣೆಗಳನ್ನು ಮಾಡುತ್ತಾರೆ. ಬೊಮ್ಮಗೊಂಡೇಶ್ವರನು ತನಗೆ ತನ್ನ ಜನಾಂಗಕ್ಕೆ ಮಾಡಿದ ಉಪಕಾರಕ್ಕೆ ಪ್ರತಿ ಉಪಕಾರವನ್ನು ಸಲ್ಲಿಸಲು ಪ್ರಯತ್ನಿಸುತ್ತಾರೆ. ವ್ಯಕ್ತಿಯೊಬ್ಬನ ಮೇಲೆ ಇಟ್ಟಿರುವ ಆಗಾಧ ಗೌರವವು

ಆತನನ್ನು ದೈವೀಕರಿಸಲು ಪ್ರೇರಣೆ ಕೊಟ್ಟಿರುತ್ತವೆ ಎನ್ನುವುದನ್ನು ಈಗಾಗಲೇ ಹೇಳಿದ್ದಾಗಿದೆ. ಬುಡಕಟ್ಟುಗಳ ಮುಗ್ಧ ಮನಸ್ಸುಗಳು ವಿವಿಧ ಕಾರಣಗಳಿಂದ ಪ್ರಕೃತಿಯನ್ನು, ಪ್ರಕೃತಿ ನಿಗೂಢಗಳನ್ನು ಪೂಜಿಸುತ್ತವೆ. ಅದು ಎಲ್ಲ ಕಾಲದಲ್ಲೂ ಎಲ್ಲ ಸಂದರ್ಭಗಳಲ್ಲೂ ಸಾಧ್ಯವಿದೆ.

ಇದೆ ಹಿನ್ನೆಲೆಯಲ್ಲಿ ಬೊಮ್ಮಗೊಂಡೇಶ್ವರನನ್ನು ಕೂಡ ಗೊಂಡ ಬುಡಕಟ್ಟಿನವರು ದೈವೀಕರಿಸುವ ಪ್ರಯತ್ನ ಮಾಡುತ್ತಿದ್ದಾರೆ. ಇದು ಇನ್ನೂ ನಡೆಯುತ್ತಿರುವ ನಿರಂತರ ಪ್ರಕ್ರಿಯೆಯಾಗಿದೆ. ಸಮಾಜದ ಇತರ ವರ್ಗದವರು ಈತನನ್ನು ಪೂಜಿಸುವುದಿಲ್ಲ ಆದರೆ ಜಾತ್ರೆಯಲ್ಲಿ, ಉತ್ಸವ ಮೆರವಣಿಗೆಯಲ್ಲಿ, ಅನ್ನ ಸಂತರ್ಪಣೆಯಲ್ಲಿ ಭಾಗಿಯಾಗುತ್ತಾರೆ. ಅಂದರೆ ಗೊಂಡ ಬುಡಕಟ್ಟಿನವರಲ್ಲಿ ಇದ್ದ ಬೊಮ್ಮಗೊಂಡೇಶ್ವರನ ಕುರಿತು ಭಕ್ತಿ, ಅಭಿಮಾನ ಇತರ ವರ್ಗದವರಲ್ಲಿ ಕಂಡು ಬರುವುದಿಲ್ಲ. ಯಾಕೆ ಬೊಮ್ಮಗೊಂಡೇಶ್ವರ ತನ್ನ ಜನಾಂಗದ ಜೊತೆಗೆ ಇತರರಲ್ಲಿ ಮನ್ನಣೆಗೆ ಪಾತ್ರರಾಗಿದ್ದೂ ಎಂಬುದು ಮೂರು ಅಂಶಗಳಿಂದ ತಿಳಿದುಬರುತ್ತದೆ. ಆವುಗಳೆಂದರೆ ಒಂದು ತಾನು ಹುಟ್ಟಿದ ಸಮೂದಾಯ (ಬುಡಕಟ್ಟು) ಕ್ಕೆ ಮಾಡಿದ ಉಪಕಾರ, ಇನ್ನೊಂದು ತನ್ನ ಪ್ರದೇಶ ಹಾಗೂ ಇಡೀ ಮಾನವ ಜನಾಂಗದ ಪ್ರತಿಯಾಗಿ ಮಾಡಿದ ಉಪಕಾರ ಹಾಗೂ ಮತ್ತೊಂದು ಈತನು ಮಾಡಿ ತೋರಿಸಿದ ಪವಾಡಗಳು.

ಈ ಮೂರು ಅಂಶಗಳು ಬೊಮ್ಮಗೊಂಡೇಶ್ವರನೆಂಬ ಒಬ್ಬ ವ್ಯಕ್ತಿ ದೈವೀಕರಣಕ್ಕೊಳಗಾಗಲು ಕಾರಣವಾಗಿವೆ. ಇವು ಬಿಟ್ಟಿಯೂ ಅವರು ಮಾಡಿ ತೋರಿಸಿದ ಪವಾಡಗಳು ಜನರ ಮನಸ್ಸಿನಲ್ಲಿ ನೆಲೆಯೂರಿ ಒಬ್ಬ ದೇವರಾಗಿ ನಿಲ್ಲಿಸಿ ಪೂಜಿಸುತ್ತಿರುವುದು ಕಂಡು ಬರುತ್ತದೆ. ಪವಾಡಗಳು ಯಾವಾಗಲೂ ಜನರಲ್ಲಿ ಭಯ ಭಕ್ತಿಯನ್ನು ಹುಟ್ಟಿಸುತ್ತವೆ. ಜನಪದರಲ್ಲಿ ಇಂದಿಗೂ ಅನೇಕ ನಂಬಿಕೆಗಳಿವೆ. ಏಕೆಂದರೆ ಸರಿಯಾದ ಸಮಯದಲ್ಲಿ ಮಳೆಯಾಗದೇ ಹೋದರೆ, ರೋಗ ರುಜಿನಗಳು ಬಂದರೆ, ಪೂಜೆ ಪುನಸ್ಕಾರಗಳು ಮಾಡಬೇಕಾದರೆ, ವ್ಯವಹಾರಗಳು ವಿಫಲವಾಗುತ್ತಿದ್ದರೆ ಮುಂತಾದವುಗಳ ಕುರಿತು ಹೇಳಿಕೆಗಳನ್ನು ಕೇಳಿ ಅದೇ ಪ್ರಕಾರ ಕಾರ್ಯಗಳನ್ನು ಮಾಡುತ್ತಾರೆ. ಆ ಹೇಳಿಕೆಗಳು ನಿಜವಾದಾಗ ಯಾರು ಹೇಳಿಕೆಗಳನ್ನು ಹೇಳಿರುತ್ತಾರೋ ಅವರ ಮೇಲೆ ಅಪಾರ ನಂಬಿಕೆ, ನಿಷ್ಠೆ, ಭಕ್ತಿ ಬೆಳೆಯಲಾರಂಭಿಸುತ್ತದೆ. ಇಂತಹ ನಂಬಿಕೆಗಳು ಇನ್ನೂ ಬಲವಾದಾಗ ಆ ವ್ಯಕ್ತಿಯನ್ನು ದೈವೀಕರಿಸಲು ಪ್ರಯತ್ನಿಸುತ್ತಾರೆ.

ಬೊಮ್ಮಗೊಂಡೇಶ್ವರ ಕೂಡ ಪವಾಡ ಪುರುಷ. ಈತ ಹೇಳಿದ ಮಾತುಗಳು ನಿಜವಾದಾಗ ಜನರಲ್ಲಿ ನಂಬಿಕೆ, ಭಕ್ತಿ ಗೌರವ ಮಾಡಿ ಆತನನ್ನು ಒಬ್ಬ ದೇವತಾಪುರುಷನೆಂಬಂತೆ ಆರಾಧಿಸಲು ಪ್ರಯತ್ನಿಸಿದರು. ಎಲ್ಲ ಮಹಾ ಪುರುಷರು ಇಂದು ಒಂದಿಲ್ಲ ಒಂದು ರೀತಿಯಲ್ಲಿ ದೈವೀಕರಣಕ್ಕೊಳಗಾಗಿದ್ದಾರೆ. ಯೇಸು, ಬುದ್ಧ, ಮಹಾವೀರ, ಬಸವ ಮುಂತಾದವರನ್ನು ಇಲ್ಲಿ ನೆನೆಯಬಹುದು. ಬಸವಣ್ಣನ ಮಟ್ಟಿಗೆಂದರೆ ಇದೊಂದು ವಿಪರ್ಯಾಸದ ಸಂಗತಿಯೇ ಸರಿ. ಯಾವ ತತ್ವಗಳ ಆಧಾರದಿಂದ ಮೂರ್ತಿ ಪೂಜೆಯನ್ನು ಖಂಡಿಸಿದನೋ, ಆ ತತ್ವಗಳನೇ ನುಚ್ಚು ನೂರು ಮಾಡಿ, ಬಸವಣ್ಣನ ಮೂರ್ತಿಯ ಸುತ್ತ ದೇವಾಲಯ ಕಟ್ಟಿ ಪೂಜಿಸುತ್ತಿದ್ದೇವೆ, ನಮ್ಮ ಭಾರತೀಯ ಸಮಾಜದಲ್ಲಿ ಮಹಾಪುರುಷರಿಗೇನು ಕೊರತೆ ಇಲ್ಲ. ಈ ಮಾತನ್ನು ಮನಗಾಣಿಸಿಕೊಳ್ಳಬೇಕಾದರೆ

ಇಲ್ಲಿ ಕಂಡು ಬರುವ ದೇವಾಲಯಗಳ ಸಮೀಕ್ಷೆ ಮಾಡಿದರೆ ಸಾಕು. ಬೊಮ್ಮಗೊಂಡೇಶ್ವರ ಕೂಡ ಒಂದು ಹಿಂದುಳಿದ ಬುಡಕಟ್ಟಿನಲ್ಲಿ ಜನಿಸಿದರೂ ಕೂಡ ಆತ ಎಸಗಿದ ಮಹಾನ್ ಕಾರ್ಯಗಳಿಂದ ಮಾನವತಾವಾದಿ ಗುಣಗಳಿಂದ ಪೂಜೆಗೊಳ್ಳಲ್ಪಡುತ್ತಿರುವುದು ಮೇಲ್ನೋಟಕ್ಕೆ ಕಂಡು ಬರುವ ಸಂಗತಿಯಾಗಿದೆ.

---

# ಆಧಾರ ಗ್ರಂಥಗಳು

(೧) 'ಬೀದರ ಜಿಲ್ಲೆಯ ಜನಪದ ಕಥೆಗಳು'
ಸಂ. ಕ್ಯಾಥನಹಳ್ಳಿ ರಾಮಣ್ಣ
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾಲಯ, ಮೈಸೂರು
೧೯೭೬

(೨) 'ಬೊಮ್ಮಗೊಂಡೇಶ್ವರರ ಪವಾಡಗಳು'
ಸಂ. ಮಾಳಪ್ಪ ಅಡಸಾರೆ,
ಮಹಾತ್ಮ ಬೊಮ್ಮಗೊಂಡೇಶ್ವರ ಪ್ರಕಾಶನ,
ಬೀದರ.
೧೯೯೫

(೩) 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂಪುಟ ೪, ಸಂಚಿಕೆ ೪, ನವೆಂಬರ ೧೯೯೭.
ಸಂ. ಎಚ್.ಸಿ. ಶಿವಕುಮಾರ
ಲೇಖನ : 'ನಿರ್ಲಕ್ಷಿತ ಇತಿಹಾಸದಲ್ಲಿ ಬೊಮ್ಮಗೊಂಡೇಶ್ವರರ ಚರಿತ್ರೆ'
ಲೇಖಕರು : ಡಾ|| ಕೆ.ಎಂ. ಮೈತ್ರಿ
ಕನಕ ಪ್ರತಿಷ್ಠಾನ, ಶ್ರೀ ಕಾಗಿನೆಲೆ ಮಹಾ ಸಂಸ್ಥಾನ, ಕನಕ ಗುರುಪೀಠ ,
ಕಾಗಿನೆಲೆ - ೫೮೧ ೧೫೩.

(೪) 'ಸ್ಥಳೀಯ ಚರಿತ್ರೆ : ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ'
ಸಂ. ಪ್ರೊ. ಲಕ್ಷ್ಮಣ ತೆಲಗಾವಿ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬.
೨೦೦೩.

(೫) 'ಬೀದರ ಜಿಲ್ಲಾ ದರ್ಶನ'
ಸಂ. ಡಾ|| ಜಗನ್ನಾಥ ಹೆಬ್ಬಾಳೆ
ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್, ಬೀದರ.
೧೯೯೨

## ೭. ಸಮಾರೋಪ

ಇಲ್ಲಿ ಜನಪದದ ಸೆಲೆಯಲ್ಲಿ ಸುಳಿದಾಡುವ ಬೊಮ್ಮಗೊಂಡೇಶ್ವರನ ಬದುಕನ್ನು ಚಿತ್ರಿಸಲು ಪ್ರಯತ್ನಿಸಿದ್ದೇನೆ. ಸ್ಥಳೀಯ ವ್ಯಕ್ತಿಯಾದ ಈತನ ಒಟ್ಟು ಬದುಕು ಕಟ್ಟಿಕೊಳ್ಳುವಲ್ಲಿ ಲಿಖಿತ ಆಧಾರಗಳು ಗೌಣವಾಗಿರುವುದರಿಂದ ಮೌಖಿಕ ಆಕರಗಳನ್ನೇ ಪ್ರಧಾನವಾಗಿ ಇಟ್ಟುಕೊಂಡಿದ್ದೇನೆ. ಈತನ ಕುರಿತು ದೊರೆಯುವ (ಸಾಧ್ಯವಾದ) ಎಲ್ಲ ಆಕರಗಳು ಹಲವು ಸಂದರ್ಭದಲ್ಲಿ ಸಂಶಯಕ್ಕೆ ಗುರಿ ಮಾಡಿವೆ. ಕಾರಣ ಜನಪದರ ಅಭಿವ್ಯಕ್ತಿ ರೂಪ ಬೇರೆ ಬೇರೆಯಾಗಿದ್ದರೂ ವಸ್ತು ಮಾತ್ರ ಒಂದೇ. ಬೊಮ್ಮಗೊಂಡೇಶ್ವರನ ಮತ್ತು ಅರಸರ ಭೇಟಿಯ ಸನ್ನಿವೇಶದ ಕುರಿತು ಐತಿಹ್ಯವು ಕಥೆಯಾಗಿ, ಹಾಡಾಗಿ, ಕೆಲವು ಸಲ ಪವಾಡವಾಗಿ (ಬಂಡೆಗಲ್ಲು ಸರಿಸಿದ್ದು) ಮಾರ್ಪಡುತ್ತದೆ. ಕಥೆ, ಐತಿಹ್ಯ, ಪವಾಡಗಳು ಎಂದು ಸೌಲಭ್ಯಕ್ಕಾಗಿ ವಿಭಜಿಸಿದರೂ ಈತನ ಸಂದರ್ಭದಲ್ಲಿ ಅವು ಯಾವುದೋ ಮೂಲೆಯಲ್ಲಿ ಏಕೀಕೃತವಾಗುತ್ತವೆ. ಅವು ಮತ್ತೆ ಮತ್ತೆ ಪುನರುಚ್ಚರಿಸುತ್ತವೆ. ಈತನ ಕುರಿತ ಒಟ್ಟು ಅಭಿಪ್ರಾಯಗವನ್ನು ಒಂದೇ ಒಂದು ಮಾತಿನಲ್ಲಿ ಹೇಳುವುದಾದರೆ, 'ಹಿಡಿಯಲ್ಲಿ ಹಿಡಿದ ದೀಪದಂತೆ' ಎನ್ನಬಹುದು. ದೀಪವು ಹೇಗೆ ಹಿಡಿಯಲ್ಲಿ ಹಿಡಿದರೆ ಕೋಣೆ ತುಂಬ ಕತ್ತಲಾಗುವುದು, ಬಿಟ್ಟರೆ ಬೆಳಕಾಗುವುದು. ಅದರಂತೆ ಈತನ ಒಟ್ಟು ಮೂರ್ತಿ ಕೆತ್ತಲು ಬಳಸಿದ ಸಾಧನಗಳು ಹಾಗೂ ಸಾಂಸ್ಕೃತಿಕ ವೀರನನ್ನಾಗಿದ್ದನ್ನು ಚಿತ್ರಿಸಲು ಬಳಸಿದ ಬಣ್ಣಗಳು ಕೃತಕವಾಗಿರದೆ ನೈಜತೆಯಿಂದ ಕೂಡಿದ್ದಾಗಿವೆ. ''ಚಾರಿತ್ರಿಕ ಹಿನ್ನೆಲೆಯಿಂದ ಕೂಡಿರುವ 'ಸ್ಥಳೀಯ ಬದುಕು' ಆಕಾರ-ವಿಕಾರಗಳಿಲ್ಲದ ಮೂರ್ತಿಯಂತೆ'' ('ಸ್ಥಳೀಯ ಚರಿತ್ರೆ - ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ' ಸಂ. ಪ್ರೊ॥ ಲಕ್ಷ್ಮಣ ತೆಲಗಾವಿ, ಪು. ೧೮) ಎನ್ನುವ ಮಾತು ನಿಜವೇ ಆಗಿದೆ. ಅವುಗಳನ್ನು ಸ್ಪಷ್ಟವಾಗಿ ಅರ್ಥೈಸಲಾಗದೆ ಸಮಸ್ಯೆ ಅಸ್ಪಷ್ಟ ರೂಪದಲ್ಲಿ ಎದುರುಗೊಳ್ಳುತ್ತವೆ.

ಈ ಅಧ್ಯಯನದಲ್ಲಿ ಸ್ಥಳೀಯ ವಕ್ತಾರರ ಆಲೋಚನೆಗಳನ್ನು ಅರ್ಥಮಾಡಿಕೊಳ್ಳುತ್ತಲೇ ಒಂದು ನಿರ್ಣಯಕ್ಕೆ ಬಂದಿದ್ದೇನೆ. ಸಮುದಾಯಗಳ ಮೇಲೆ ಒತ್ತಡಗಳಿದ್ದು ವ್ಯಕ್ತಿಯೊಬ್ಬನನ್ನು ದೈವೀಕರಣಗೊಳಿಸುತ್ತವೆ. ಇಲ್ಲಿ ಸಮೂದಾಯಗಳು ತಮ್ಮ ಶಕ್ತಿ ಹೆಚ್ಚಿಸಿಕೊಳ್ಳಲು ಪ್ರಯತ್ನಪಡುತ್ತಿರುತ್ತವೆ. ಬೊಮ್ಮಗೊಂಡೇಶ್ವರ ಸ್ಥಳೀಯವಾಗಿ, ಸ್ಥಳೀಯರಿಗಾಗಿ ಕೆಲವು ವಿಶಿಷ್ಟ ಸೇವೆಯನ್ನು ಸೇವೆಯನ್ನು ಸಲ್ಲಿಸುದ್ದಕ್ಕಾಗಿ ಕಥೆ, ಐತಿಹ್ಯ, ಪವಾಡಗಳು ಸೃಷ್ಟಿಗೊಂಡಿವೆ. ಇವುಗಳೇ ಗೊಂಡರಲ್ಲಿ ಅಭಿಮಾನ ಮೂಡಿಸಿವೆ. ತಮಗಾಗಿ ತಮ್ಮ ಜನರಿಗಾಗಿ ಈತ ಮಾಡಿದ ಸಹಾಯ ಮರೆಯದೇ ಮನಬಂದಂತೆ ಆತನನ್ನು ವೈಭವೀಕರಿಸಲು ಪ್ರಯತ್ನಿಸುತ್ತಾರೆ. ಅದಕ್ಕಾಗಿ ಈತನ ಕುರಿತ ಕಥೆಯನ್ನು ಪವಾಡವೆಂತಲೂ, ಪವಾಡಗಳನ್ನು ಕಥೆಯಂತಲೂ, ಪವಾಡಗಳನ್ನು ಕಥೆಯಂತಲೂ, ಐತಿಹ್ಯವನ್ನು ಕಥೆಗಳೆಂತಲೂ ಲಗುಲಗಾಮಿಲ್ಲದೆ ನಿರ್ಭಿಡೆಯಾಗಿ ಒಂದರಲ್ಲಿ ಇನ್ನೊಂದು ಸೇರಿಸಿಹೇಳುತ್ತಾರೆ. ಅವುಗಳನ್ನು ವಿಭಜಿಸಿಕೊಳ್ಳುವಾಗ ಸ್ವಲ್ಪ ಎಚ್ಚರ ವಹಿಸಿಕೊಂಡರೆ ಸಾಕು. ಅರ್ಧಕ್ಕರ್ಧ ಸಮಸ್ಯೆ ಬಗೆಹರಿಸಿಕೊಂಡಂತೆ.

ಇನ್ನೊಂದು ಗಮನಿಸಬಹುದಾದ ಅಂಶವೆಂದರೆ ಗೊಂಡ ಬುಡಕಟ್ಟಿನವರು ಈತನನ್ನು ನಾಯಕನನ್ನಾಗಿ ಗುರುತಿಸಿಕೊಂಡದ್ದು ತಮ್ಮ ಹೋರಾಟಕ್ಕೆ ಪ್ರತಿನಿಧಿಯೊಬ್ಬನನ್ನು ಆಯ್ಕೆ ಮಾಡಿ ಹಳ್ಳಿ ಹಳ್ಳಿಗಳಲ್ಲಿ ಮೂರ್ತಿ ಸ್ಥಾಪನೆ ಮಾಡಿದ್ದು, ಇಲ್ಲಿ (ಬೀದರ) ಗೊಂಡರು ಬೀರಗೊಂಡ,

ಮಾಳಗೊಂಡ, ಮೈಲಾರ ಮಲ್ಲಣ್ಣ ಮುಂತಾದವರನ್ನು ಆರಾಧಿಸಿದರೂ ಅವರನ್ನು ನಾಯಕನಾಗಿ ಮಾಡಿಕೊಂಡು ಹೋರಾಟ ನಡೆಸಲಿಲ್ಲ, ಇವರ ಮೂರ್ತಿಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಸ್ಥಾಪಿಸಿಕೊಂಡಿಲ್ಲ (ದೇವಾಲಯಗಳನ್ನು ಬಿಟ್ಟು) ಇಲ್ಲಿ ಭಕ್ತಿ ಪ್ರಧಾನವಾಗಿದ್ದು, ಅಭಿಮಾನ ಗೌಣ ರೂಪದಲ್ಲಿದ್ದದ್ದು ಎದ್ದು ಕಾಣಿಸುತ್ತದೆ. ಆದರೆ ಬೊಮ್ಮಗೊಂಡೇಶ್ವರನ ವಿಷಯದಲ್ಲಿ ಹಾಗಲ್ಲ ಭಕ್ತಿ ಗೌಣವಾಗಿದ್ದು (ಕೆಲವು ಹಳ್ಳಿಗಳನ್ನು ಹೊರತು ಪಡಿಸಿ) ಅಭಿಮಾನ ಪ್ರಧಾನವಾಗಿದೆ. ಈ ಎಲ್ಲವುದರ ಹಿಂದೆ ಕಾರ್ಯನಿರ್ವಹಿಸಿದ ಸಮುದಾಯವೊಂದರ ತುಡಿತವನ್ನು ಇಲ್ಲಿ ಅರ್ಥೈಸಿಕೊಳ್ಳಬೇಕಾಗಿದೆ. ಈಗಾಗಲೇ ಶತಮಾನಗಳಿಂದ ಪೂಜೆಗೊಳಪಟ್ಟಿರುವವರಾದ ಬೀರಗೊಂಡ, ಮಾಳಗೊಂಡ, ಮೈಲಾರ ಮಲ್ಲಣ್ಣ ಮುಂತಾದವರು ಒಂದಾನೊಂದು ಕಾಲದಲ್ಲಿ ಬದುಕಿದರೂ ಅವರು ದೇವರೆ ಎಂಬುದು ನಂಬಿಕೆ, ಬೊಮ್ಮಗೊಂಡೇಶ್ವರನನ್ನು ಮಾನವನೂ, ಮಹಾತ್ಮನೂ ಆಗಿದ್ದರೂ, ಈತನೊಬ್ಬ ದೇವರು ಎಂಬುದು ಸಾರ್ವತ್ರಿಕ ಒಪ್ಪಿಗೆಯಾದಂತೆ ಕಂಡು ಬರುವುದಿಲ್ಲ. ಏಕೆಂದರೆ ಸಾರ್ವತ್ರಿಕವಾಗಿ ಒಪ್ಪಿಕೊಂಡಿದ್ದರೆ ರೂಢಿಗತವಾಗಿ ಕೆಲವು ಆಚರಣೆಗಳು ಗೋಚರಸುತ್ತಿದ್ದವು. ಆದರೆ ಇಲ್ಲಿ ಈತನ ಕುರಿತ ಯಾವುದೇ ಆಚರಣೆಗಳು ಇಲ್ಲ, ಕೆಲವೇ ಕೆಲವು ಕಡೆ ಜಾತ್ರೆ, ಮೆರವಣಿಗೆ, ಅನ್ನ ಸಂತರ್ಪಣೆ, ಭಜನೆ ಮುಂತಾದವುಗಳನ್ನು ಜನರು ಮಾಡುತ್ತಾರೆ. ಅವು ಇತ್ತೀಚಿಗೆ ಅಂದರೆ ಎಪ್ಪತ್ತರ ದಶಕದಿಂದ ಮಾಡುತ್ತ ಬಂದಿರುವಂಥವುಗಳು, ಈ ಆಚರಣೆಗಳು ಅಭಿಮಾನದ ಗಡಿ ದಾಟಿ ಅಸ್ತಿತ್ವಕ್ಕೆ ಬಂದಂಥವುಗಳು. ಬಹುಶಃ ಸಮಾಜದಲ್ಲಿ ಜನರು ದೇವರು ಎಂಬುದನ್ನು ಸೃಷ್ಟಿ ಮಾಡಿದ್ದು ಈ ಹಿನ್ನೆಲೆಯಲ್ಲಿಯೇ ಎನಿಸುತ್ತದೆ.

ಸ್ಥಳೀಯ ದೈವಗಳು ಸೃಷ್ಟಿಗೊಂಡು ಗಡಿದಾಟಿ ಹೋಗುವ ಸಂದರ್ಭಗಳು ಒದಗುತ್ತವೆ. ಸ್ಥಳೀಯವಾಗಿ ಮಹತ್ವ ಪಡೆದ ಇಂಥ ವ್ಯಕ್ತಿಗಳು ಕಾರಣಾಂತರಗಳಿಂದ ಜನರ ದೃಷ್ಟಿಯಲ್ಲಿ ಪೂಜ್ಯರೆನಿಸಿಕೊಳ್ಳುವುದರ ಜೊತೆಗೆ ತಮ್ಮ ಸೀಮಿತ ಪ್ರದೇಶದಿಂದ ಗಡಿ ದಾಟಿ ಹೋಗುತ್ತದೆ. ಮುಂದೊಂದು ದಿನ ಪರಂಪರಾಗತ ಆಚರಣೆಗಳು ಹುಟ್ಟಿಕೊಂಡು ಎಲ್ಲೆಡೆ ಪ್ರಸಾರಗೊಳ್ಳುತ್ತವೆ.

ಬೊಮ್ಮಗೊಂಡೇಶ್ವರನೊಬ್ಬ ಸ್ಥಳೀಯ ದೈವ ಎಂಬುದು ಸಾರ್ವತ್ರಿಕಗೊಂಡಿಲ್ಲದಿದ್ದರೂ, ಈತನನ್ನು ಒಬ್ಬ ಮಹಾತ್ಮನಾಗಿ ಗೌರವಾದರಗಳನ್ನು ಸಲ್ಲಿಸುತ್ತಾರೆ. ಸಂಘ, ಸಂಸ್ಥೆಗಳಲ್ಲಿ, ಮನೆ-ದೇವಾಲಯಗಳಲ್ಲಿ, ಭಿತ್ತಿ ಚಿತ್ರಗಳಲ್ಲಿ, ಮದುವೆಯ ಕರೆಯೋಲೆಯ ಮೇಲೆ ಈತನ ಭಾವಚಿತ್ರ ಇಡುವುದು ಈ ಹಿನ್ನೆಲೆಯಲ್ಲಿ ಕಂಡು ಬರುವುದು ನೋಡಬಹುದು. ಒಂದು ಮಾತಂತು ನಿಜ ಬೊಮ್ಮಗೊಂಡೇಶ್ವರನು ಪೂರ್ತಿ ದೈವತ್ವಕ್ಕೇರಿದವನೆಂದು ಒಪ್ಪಿಕೊಳ್ಳುವುದಾಗಲಿ, ತಿರಸ್ಕರಿಸುವುದಕ್ಕಾಗಲಿ ಇಲ್ಲಿ ಆಗುವುದಿಲ್ಲ. ಇದನ್ನು ನಿರ್ಣಯಿಸಲು ಒಂದು ಕಾಲ ನಿರೀಕ್ಷಿಸಬೇಕಾಗುತ್ತದೆ. ಭವಿಷ್ಯವೇ ಇದಕ್ಕೆ ಉತ್ತರ ಕೊಡಬಹುದಾಗಿದೆ. ಏಕೆಂದರೆ ಬುಡಕಟ್ಟುವೊಂದರಲ್ಲಿ ವ್ಯಕ್ತಿಯೊಬ್ಬನನ್ನು ದೈವೀಕರಿಸುವ ಪ್ರಕ್ರಿಯೆ ನಿರಂತರ ನಡೆ ಇರುತ್ತದೆ. ಕೆಲವು ವರ್ಷಗಳಿಂದ ಪ್ರಾರಂಭವಾದ ಈ ಪ್ರಕ್ರಿಯೆ ನಿರಂತರ ನಡೆದೆ ಇರುತ್ತದೆ. ಕೆಲವು ವರ್ಷಗಳಿಂದ ಪ್ರಾರಂಭವಾದ ಈ ಪ್ರಕ್ರಿಯೆ ಇಂದು ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಂಡಿದೆ. ಅದಕ್ಕಾಗಿ (ಬೀದರ ಜಿಲ್ಲೆಯಲ್ಲಿ) ಗೊಂಡ ಬುಡಕಟ್ಟಿನವರು ಆರಾಧಿಸುವ ಪ್ರಮುಖ ದೈವಗಳಲ್ಲಿ ಬೊಮ್ಮಗೊಂಡೇಶ್ವರನೊಬ್ಬ ಸೇರಿ ಕೊಂಡಿರುವುದು ಕಂಡು ಬರುತ್ತದೆ.

ಬೊಮ್ಮಗೊಂಡೇಶ್ವರನನ್ನು ಒಬ್ಬ ವ್ಯಕ್ತಿ ನೆಲೆಯಲ್ಲಿ ನೋಡುವಾಗ ಕಂಡು ಬರುವ ಅಂಶಗಳು ಆತ ಒಂದು ಬುಡಕಟ್ಟಿನೊಡನೆ ಹೊಂದಿದ ಅಂತರ ಸಂಬಂಧವನ್ನು ವೀಕ್ಷಿಸುವಲ್ಲಿ ಬದಲಾವಣೆಗೊಳ್ಳುವುದು. ಈ ಎರಡು ನೆಲೆಗಳಲ್ಲಿ ಈತನನ್ನು ಅರಿತುಕೊಳ್ಳುವುದು ಸೂಕ್ತವೆನಿಸುತ್ತದೆ ತಾನು ನಾಯಕತ್ವವನ್ನ ಪಡೆಯುವುದರ ಮೂಲಕ ತನ್ನ ಸಮೂದಾಯದ ಮೇಲೆ ವಿಶಿಷ್ಟವಾದ ಕಸುವನ್ನು ಪಡೆದುಕೊಂಡಿದ್ದಾನೆ. ಆ ಅಧಿಕಾರ ಪಡೆಯುವಲ್ಲಿ ಆತ ಒಂದು ಬಗೆಯ ಸಾಧನೆ ಮಾಡಿದರೆ ಆತನನ್ನು ಸ್ಮರಣೆಯಲ್ಲಿಟ್ಟುಕೊಳ್ಳಲು ಬುಡಕಟ್ಟುಗಳು ಸೆಣಸಾಡುವುದು ಸಾಮಾನ್ಯವಾಗಿ ಕಂಡು ಬರುವ ದೃಶ್ಯ. ಆಧುನಿಕತೆಯೆಡೆಗೆ ವಾಲುತ್ತಿರುವ ಸಮುದಾಯಗಳಿಗೆ ಇಂಥ ಸೆಣಸಾಟಗಳು ಅನಿವಾರ್ಯವಾಗುತ್ತವೆ. ತಮ್ಮ ಅಸ್ತಿತ್ವಕ್ಕಾಗಿಯೋ ಕೆಲವು ಸಲ ನಾಗರಿಕ ಸಮಾಜದಿಂದ ಯಾವುದೋ ತರಹದ ಸೌಲತ್ತುಗಳಿಗಾಗಯೋ, ಅಥವಾ ಆ ಸಮಾಜದಲ್ಲಿ ಒಂದಾಗಿ ಬೆರೆಯುವ ಹಂಬಲದಿಂದಲೋ ಒಂದು ವಿಶಿಷ್ಟ ಪ್ರಕ್ರಿಯೆ ಕಡಿಗಳು ಕಾಲಾಂತರದಲ್ಲಿ ಸೇರಿಕೊಳ್ಳುತ್ತವೆ. ಇತಿಹಾಸದಲ್ಲಿ ನಡೆದು ಹೋದ ಒಂದು ಘಟನೆ ವರ್ತಮಾನದಲ್ಲಿ ಗಂಟು ಹಾಕಿಕೊಳ್ಳುವುದುಂಟು. ಹಿಂದಿನ ಎಳೆಗಳನ್ನು ಹಿಡಿದುಕೊಂಡು ಇಂದಿನ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲು ಪ್ರಯತ್ನಿಸಬಹುದು. ಈ ಜಿಲ್ಲೆಯಲ್ಲಿ ನಡೆದ ಗೊಂಡರ ಪ್ರತಿಭಟನೆ ಈ ಮಾತಿಗೆ ಸಾಕ್ಷಿ. ಗೊಂಡ ಪ್ರಮಾಣ ಪತ್ರಗಳನ್ನು ಪಡೆಯಲು ಮಾಡಿದ ಹೋರಾಟ ಹಾಗೂ ತಮ್ಮನ್ನು ಒಂದುಗೂಡಿಸಿಕೊಳ್ಳಬೇಕು ಎಂಬ ಮನೋಭಾವ ಇಲ್ಲಿ ಕಾರ್ಯನಿರ್ವಹಿಸಿದಂತೆ ತೋರುತ್ತದೆ.

ಈತನ ಒಟ್ಟು ಬದುಕನ್ನು ಕಟ್ಟಿಕೊಂಡು ಐತಿಹಾಸಿಕ ದೃಷ್ಟಿಯಿಂದ ಒಂದು ನಿರ್ಣಯಕ್ಕೆ ಬರಲು ಸ್ವಲ್ಪ ಎಡರುತೊಡರುಗಳಿವೆ. ದಾಖಲಾತಿಗಳ ಕೊರತೆಯಿಂದ ಖಚಿತತೆಗೆ ಬರುವಾಗ ಕೆಲವು ಸಂಶಯಗಳು ಮೊಳಕೆಯೊಡೆಯುತ್ತವೆ. ನಮ್ಮ ಸಮಾಜದಲ್ಲಿ ಇತಿಹಾಸಕ್ಕೆ ಮಹತ್ವ ಕೊಡದೇ ಹೋದದ್ದು, ಕೊಟ್ಟಿದ್ದರೂ ಅದರಡಿಯಲ್ಲಿ ಸ್ಥಳೀಯ ಚರಿತ್ರೆ ಹೂತು ಹೋಗಿದ್ದೆ ಇದಕ್ಕೆ ಕಾರಣವಾಗಿದೆ. ಅದರಲ್ಲೂ ಬೊಮ್ಮಗೊಂಡೇಶ್ವರನನ್ನು ಇಡೀ ಚರಿತ್ರೆಯಿಂದಲೇ ದೂರಿಕರಿಸಲಾಗಿದೆ. ಸ್ಥಳೀಯರು ಕೂಡ ಈ ಕುರಿತ ಹೆಚ್ಚಿನ ಲಕ್ಷ್ಯ ವಹಿಸಲಿಲ್ಲವೆನಿಸುತ್ತದೆ. ಇಲ್ಲಿ ಗೊಂಡರು ಈತನನ್ನು ನಾಯಕನಾಗಿ ಮಾಡಿಕೊಂಡು ತಮ್ಮ ವೈಯಕ್ತಿಕ ಅಭಿಲಾಷೆಗಳನ್ನು ಪೂರೈಸಿಕೊಂಡರೆ ಹೊರತು, ಆತನ ಬದುಕಿನ ಕುರಿತು ಆಲೋಚನೆಗೈದಿಲ್ಲ. ಸಮೂದಾಯವೊಂದನ್ನು ನಿರ್ದೇಶಿಸಿಕೊಂಡು ಬೊಮ್ಮಗೊಂಡೇಶ್ವರನನ್ನು ಸ್ಮರಣೆಯಲ್ಲಿ ಇಟ್ಟುಕೊಂಡಿದ್ದಾರೆ ವಿನಃ ದಾಖಲು ಮಾಡಲೇ ಇಲ್ಲ. ಒಂದು ರೀತಿಯ ವಿಪರ್ಯಾಸವೇ ಎನ್ನಬಹುದು.

'ಸುಲ್ತಾನ ಸುರಳಿ' ದಾಖಲೆ ನಂತರ ಅಂದರೆ ಕ್ರಿ.ಶ. ೧೮೬೨ರಲ್ಲಿ ಬರೆದು ಪೂರ್ಣಗೊಳಿಸಿರುವುದು ಅದರ ಮೂಲ ಹಸ್ತ ಪ್ರತಿಯಿಂದ ತಿಳಿದು ಬರುತ್ತದೆ. ಇದು ಬೊಮ್ಮಗೊಂಡೇಶ್ವರನ ಕಾಲದಲ್ಲಿನ ದಾಖಲೆ ಏನಲ್ಲ. ಕಥನ ರೂಪದಲ್ಲಿ ಹಣೆಯಲಾದ ಬಹಮನಿ ಸುಲ್ತಾನರ ಐತಿಹಾಸಿಕ ಕಥೆಗಳನ್ನು ಇದು ಒಳಗೊಂಡಿದೆ. ಅದಕ್ಕಾಗಿ ಇದನ್ನೇ ನೇರವಾಗಿ ಬಳಸಿಕೊಳ್ಳುವುದು ಅನಿವಾರ್ಯವಾಗಿದೆ. ಇದನ್ನು ಐತಿಹಾಸಕ ದೃಷ್ಟಿಯನ್ನಿಟ್ಟುಕೊಂಡು ನೋಡುವುದು ಅವಶ್ಯಕ ಆದರೆ ಈ ನನ್ನ ಅಧ್ಯಯನ ಜನಪದಿಯ ಹಿನ್ನೆಲೆಯಲ್ಲಿದ್ದುದರಿಂದ ಬೊಮ್ಮಗೊಂಡೇಶ್ವರ ಒಬ್ಬ

ಐತಿಹಾಸಿಕ ವ್ಯಕ್ತಿ ಎಂಬುದನ್ನು ಸಾಬೀತು ಪಡಿಸಲು ಹೆಚ್ಚು ಪ್ರಯತ್ನ ಪಟ್ಟಿಲ್ಲ. ಈತನೊಬ್ಬ ಸಾಂಸ್ಕೃತಿಕ ವೀರ, ಪವಾಡ ಪುರುಷನಾಗಿ ಕಾಣಿಸಿಕೊಂಡಿರುವುದಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದೇನೆ. ಕಥೆ-ಐತಿಹ್ಯಗಳನ್ನು ನಿರೂಪಣೆಯಲ್ಲಿ ಇದ್ದಂತೆ ಇಟ್ಟುಕೊಂಡು ವಿವಿಧ ಸಾಧ್ಯತೆಗಳನ್ನು ನಿರೂಪಿಸಿದ್ದೇನೆ.

ವ್ಯಕ್ತಿಯೊಬ್ಬ ಸಾಂಸ್ಕೃತಿಕ ವೀರನಾಗುವ ಪ್ರಕ್ರಿಯೆ ನಿರಂತರ ನಡೆಯುವಂಥದ್ದು, ಈ ಮಾತು ಯಾವುದೇ ಕಾಲದ ವಿಶಿಷ್ಟ ವ್ಯಕ್ತಿಗಳಿಗನ್ವಯಿಸಿ ಹೇಳಬಹುದು. ಆದರೆ ಬೊಮ್ಮಗೊಂಡೇಶ್ವರನ ಸಂದರ್ಭ ಈ ಸಂದರ್ಭದಲ್ಲಿ ಈ ಮಾತು ಇನ್ನೂ ಸ್ವಲ್ಪ ಬೇರೆಯಾಗಿಯೇ ಕಂಡು ಬರುತ್ತದೆ. ಈ ಆಧುನಿಕ ಸುಳಿಯಲ್ಲಿ ಗೊಂಡರು ತಮ್ಮ ನಾಯಕನನ್ನಾಗಿ ಆರಿಸಿಕೊಂಡು ಹೋರಾಟಕ್ಕಿಳಿದಿದ್ದನ್ನು. ಇಲ್ಲಿ ಒಂದು ಅನುಮಾನ ಮಾತ್ರ ಸಹಜವಾಗಿ ಮಾಡುತ್ತದೆ. ಅದೆಂದರೆ ನಾಯಕನಾಗಿ ಮಾಡಿಕೊಂಡಿದ್ದು ಸಹಜ. ಆದರೆ ದೈವೀಕರಿಸಿದ ಹಿನ್ನೆಲೆಯನ್ನು ನೋಡಿದರೆ ಅಂಥ ಶಕ್ತಿ ಬೊಮ್ಮಗೊಂಡೇಶ್ವರರಲ್ಲಿ ಇತ್ತೋ, ಅಥವಾ ಬುಡಕಟ್ಟಿನಲ್ಲಿಯೇ ಇಂಥ ವ್ಯಕ್ತಿಯೊಬ್ಬನನ್ನು ದೈವೀಕರಿಸುವ ಸಾಮರ್ಥ್ಯವಿರುತ್ತದೆಯೋ ಎಂಬುದು. ಒಂದು ಮಾತಂತು ನಿಜ ವ್ಯಕ್ತಿಯ ಮತ್ತು ಬುಡಕಟ್ಟುಗಳ ಶಕ್ತಿಸಾಮರ್ಥ್ಯ ಸರಿ ಸರಿಯಾಗಿಯೇ ಕಾರ್ಯ ನಿರ್ವಹಿಸುತ್ತಿರುತ್ತವೆ.

ಜನಪದರ ಬದುಕಿನಲ್ಲಿ ಸಾಧ್ಯ ಅಸಾಧ್ಯಯೆಂಬುದನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಸೃಷ್ಟಿಸಲಾರದಂತಹದನ್ನು ಸೃಷ್ಟಿಸಿಕೊಂಡಿರುತ್ತಾರೆ. ಬರಿ ಬಾಯಿ ಮಾತಿನಲ್ಲಿ ಈತನ ವ್ಯಕ್ತಿತ್ವವನ್ನು ಸಹಜವಾಗಿ ಚಿತ್ರಿಸುವ ಜನಪದರು ಇಲ್ಲಿಯವರೆಗೆ ಆತನ ಬದುಕನ್ನು ಸ್ಮರಣೆಯಲ್ಲಿಟ್ಟುಕೊಂಡಿದ್ದು ಆಶ್ಚರ್ಯ ಮೂಡಿಸುತ್ತದೆ. ಈ ಸ್ಮರಣೆಯಲ್ಲಿ ಸತ್ಯವೆಷ್ಟೋ, ಮಿಥ್ಯವೆಷ್ಟೋ! ಜನಪದರಲ್ಲಿ ಮನ್ನಣೆ ದೊರೆತರೂ ಇತಿಹಾಸಕಾರರಿಂದ ಬೊಮ್ಮಗೊಂಡೇಶ್ವರ ನಿರ್ಲಕ್ಷಿತನಾದದ್ದಂತೂ ನಿಜ.

ಐತಿಹಾಸಿಕವಾಗಿ ಈತ ನಿರ್ಲಕ್ಷಿತನಾಗಿದ್ದರೂ, ವರ್ತಮಾನದಲ್ಲಿ ಈತನ ವರ್ಚಸ್ಸು ಎದ್ದು ಕಾಣಿಸುತ್ತದೆ. ಅದು ಆಶ್ಚರ್ಯ ಮೂಡಿಸುವಂಥದ್ದು, ಇದೇ ಈ ನನ್ನ ಅಧ್ಯಯನಕ್ಕೆ ಕಾರಣವೂ ಆಗಿದೆ. ಸಹಜವಾಗಿಯೋ, ಪ್ರಯತ್ನ ಪೂರ್ವಕವಾಗಿಯೋ, ಅನಿವಾರ್ಯವಾಗಿಯೋ ಬೊಮ್ಮಗೊಂಡೇಶ್ವರನನ್ನು ತಮ್ಮ ಸುತ್ತಲೂ ಹೆಣೆದುಕೊಂಡಿದ್ದಾರೆ ಗೊಂಡರು. ಗೊಂಡ, ಕುರುಬ, ಧನಗರ ಎಂಬ ಮುಂತಾದ ಹೆಸರಿನಿಂದ ಕರೆದುಕೊಳ್ಳುವಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿರುವ ಇವರು ಅನೇಕ ರೀತಿಯಲ್ಲಿ ಈ ಸಮಸ್ಯೆಯಿಂದ ಪಾರಾಗಲು ಪ್ರಯತ್ನಿಸಿದ್ದಾರೆ. ಹೆಸರುಗಳು ಬೇರೆ ಬೇರೆಯಾಗಿದ್ದರೂ ಒಂದೇ ಬುಡಕಟ್ಟಿಗೆ ಸೇರಿದವರು ಎಂಬುದನ್ನು ಬೊಮ್ಮಗೊಂಡನ ಹೆಸರಿನಡಿಯಲ್ಲಿ ಸ್ಪಷ್ಟಪಡಿಸುತ್ತಾರೆ.

ಒಟ್ಟಾರೆಯಾಗಿ 'ಬೊಮ್ಮಗೊಂಡೇಶ್ವರನ ಅಧ್ಯಯನ'ವು ಸ್ಥಳೀಯ ಅಧ್ಯಯನವಾಗಿದ್ದರಿಂದ ಸ್ಥಳೀಯತೆಗೆ ಮಹತ್ವಕೊಟ್ಟಂತಾಗುತ್ತದೆ. ಸ್ಥಳೀಯ ಜನರು ತಮ್ಮ ತಮ್ಮಲ್ಲಿ ಒಂದು ಚರಿತ್ರೆಯನ್ನು [illegible] ಅಧ್ಯಯನಗಳಿಂದ ತಿಳಿದು ಬರುತ್ತದೆ. ಜನಸಾಮಾನ್ಯರಿಂದ ಮೂಡಿ ಬರುವ ಒಟ್ಟು ಆಲೋಚನೆಗಳು, ಅಭಿವ್ಯಕ್ತಿಗಳು ಯಾವುದೋ ಒಂದು ಸಂವಾದದಲ್ಲಿ ತೊಡಗುತ್ತವೆ. ಕೇವಲ

ಬೊಮ್ಮಗೊಂಡೇಶನಷ್ಟೇ ಅಲ್ಲ ಅವನಂಥ ಸಹಸ್ರ ವ್ಯಕ್ತಿಗಳು ಊರೂರುಗಳಲ್ಲಿ ಸಿಗಬಹುದು. ನಮ್ಮ ನಾಡಿನಲ್ಲಿ ಇಂಥ ಸಾಂಸ್ಕೃತಿಕ ವೀರರ ಕೊರತೆ ಏನಿಲ್ಲ. ಅಂಥವರನ್ನು ಗುರುತಿಸಿಕೊಳ್ಳುವ ಮೂಲಕ ನಮ್ಮಲ್ಲಿ ಸಾಂಸ್ಕೃತಿಕ ಚರಿತ್ರೆಯೊಂದನ್ನು ನಿರ್ಮಿಸಿಕೊಂಡಂತಾಗುತ್ತದೆ.

- - -

# ಅನುಬಂಧ

(೧) ಬೊಮ್ಮಗೊಂಡೇಶ್ವರನ ಕುರಿತು ಕೆಲವು ಹಾಡುಗಳು ಹಾಗೂ ವಚನಗಳು

(೨) ಬೊಮ್ಮಗೊಂಡೇಶ್ವರ ಮೂರ್ತಿ ಸ್ಥಾಪನೆ ಕುರಿತು ಮಾಹಿತಿ ಪಟ್ಟಿ

(೩) ಫೋಟೊಗಳು

(೪) ವಕ್ತಾರರ ಪಟ್ಟಿ

(೫) ಆಕರ ಗ್ರಂಥಗಳು

## ಅನುಬಂಧ - ೧

## ಬೊಮ್ಮಗೊಂಡೇಶ್ವರನ ಕುರಿತ ಹಾಡುಗಳು ಹಾಗೂ ವಚನಗಳು

### ಬೊಮ್ಮಗೊಂಡೇಶ್ವರನ ಹಾಡುಗಳು

**ಬೊಮ್ಮಗೊಂಡೇಶ್ವರನ ವರ್ಣನೆಯ ಹಾಡು :**

(೧) ಶ್ರೀ ಗುರು ಬೊಮ್ಮಗೊಂಡನ ಪಾದವ
ಪಡೆದರೆ ಜಲ್ಮ ಉದ್ಧಾರ
ಮಾಡಿಂದಲ್ಲ ಪಾಪವು ಪರಿಹಾರ
ಜಗದೊಳು ಮಾಹಾತ್ಮಿಕ ಪುರುಷರ ಆ ಆ ಆ .....॥

(೨) ಶಂಬೊರ ವರ್ಷದೊರು ಮುತ್ತಿನ ಖಣಿದೊರು
ಪರಿಚಯ ಮಾಡಿ ರತನಕಿನ ಆ ಆ ಆ .....॥

(೩) ಮುತ್ಯಾನ ಮೈ ಬಣ್ಣಾ ಮೊರಿನ ಬಾವುಚನ್ನ
ಅಮೃತ ತಿಳಿದವರು ರುದ್ರಮುನಿ ಬರದರಪ್ಪ ಕಾಲಜ್ಞ॥
ಕಾಲಜ್ಞ ತಿಳಿಸಿ ಹೇಳ್ಯಾರಪ್ಪ ಶರಣಾ ಆ ಆ ಆ .....॥

(೪) ಬೀದರ ಗ್ರಾಮದಲ್ಲಿ ಮೈ ಮಾತೊರಿದ್ರಲ್ಲಿ
ದಂಡಿಗೆಲ್ಲಾ ಕರಿ ಸ್ಯಾರೋ ನೀರು ಕುಡಿಸಿ
ಆಸಿರವಾದ ಕೋಟ್ಯರೋ ಆ ಆ ಆ .....॥

(೫) ಧರಿದೊಳು ಮೆರಿಯುವ ಮಠದ ಲಿಂಗದ ಸ್ವಾಮಿ
ಮಡಿಲ್ಲಿಂದ ಇರುವರು ಆತಂದು
ಇರಲಪ್ಪ ನಾಮ ಕರುಣಾ ಆ ಆ ಆ .....॥

(೬) ಹಾಲುಕುಡಿಯುವ ಮುತ್ಯನ ಭಜನಿ
ಹಗಲನಿರಳ ಮಾಡಿತಿನಿ ಸೌಜನ ಬೆಡತಿದ
ಸಂತಿದೊಳಗೆ ಪರಮಾತ್ಮ ಒಲೆದ
ನಾ ಹೇಳಿತಿನಿ ಕೇಳಾರಿ ಆತನ ವರ್ಣನ ಆ ಆ ಆ .....॥

(ಶರಣಪ್ಪ ಮೆತ್ರೆ (೪೫) ಅಷ್ಟೂರ ತಾ॥ ಜಿ॥ ಬೀದರ)

**ಬಹಮನಿ ಅರಸರ ಜೊತೆ ಮಾಡಿದ ಭೇಟಿ ಕುರಿತ ಹಾಡು :**

ಕುಲಕ ಕುರುಬರ ಅವರಿಗಿ ದೇವರ ಒಲುತಾರ
ದೇವರ ಒಲುತಾರ ಜಗವಲ್ಲಾ ಉದ್ಧಾರ ಮಾಡ್ಯಾರ
ಅಟ್ಟ ಅರಣದಾಗ ಅಲ್ಲಿ ಗಟ್ಟಗ್ಹೌರದಾಗ
ಕುರಿಯ ಕಾಯದಾರ ಅವರು ಬೊಮ್ಮಗೊಂಡೇಶ್ವರ ॥
ಕುಲಕ ಕುರುಬರ.......

ಕುರಿನೇ ಕಾಯಿಕೋತ ಅವರು
ಬೀದರ ತಿರುಗ್ಯಾರ ನಾಯಿ ಮೊಲವನೆ
ಅವರಿಗಿ ಬೆನ್ನೇ ಹತ್ಯಾವ
ಏಳ ಹೇಡಿ ನಾಗೇಂದ್ರ ಅವರ ಕುರಿದೊಳಗ ಆಡ್ಯಾರ ॥
ಕುಲಕ ಕುರುಬರ.......

ಬಾದಶಹ ವೀರದಂಡು ಅವರು
ಪ್ಯಾಟಿಗಿ ಬಂದಾರ ಪ್ಯಾಟಿಗಿ ಬಂದಾರ
ಅವರು ನೀಡಿಸಿ ಹೋಗ್ಯಾರ
ಸತ್ಯಾದ ಕುರುಬ ನೀನು
ನಮಗ ನೀರು ತೋರಿಸೋ
ನಿಮಗ ಜಾಗಿರ ಕೋಡುವೇನೋ
ಕುಲಕ ಕುರಬರ ॥

ಭೆಳ್ಳನ ಬಿಳಿಬಂಡಿ ಥಳ್ಳನ ತಿಳಿ ನೀರು
ಭಂಡಿ ಹೊಳಸಿರಿ ನೀರ ಮುಗಿಯಿರಿ
ಬಾರಾ ಸಾವಿರ ವೀರದಂಡು ಅವರು ಭಂಡಿ ಹೊಳಸಲ್ಲರು
ಅವರು ನೀರ ಮುಗಿವಲ್ಲರು॥
ಕುಲಕ ಕುರುಬರ.......

ಅವರ ಕೈದೊಳಗ ಒಂದು
ವಂಕನ ಬಡಿಗಿತೋ
ಬಂಡಿ ಹೋಳಸ್ಯಾರ ರಾಜರಿಗಿ
ನೀರ ಮುಗಸ್ಯಾರ॥
ಕುಲಕ ಕುರುಬರ.......

ದಾನ ಕುಡಲಿಯೇನೋ ನಿನಗ ದಿರವೆ ಕುಡಲಿಯೇನೋ
ಜಾಗೀರ ಕುಡಲಿಯೇನೋ ನಿನಗ ಬೊಮ್ಮಗೊಂಡೇಶ್ವರ॥
ದಾನ ಕುಡಲಿಬ್ಯಾಡ ನಮಗ ಧಿರವೆ ಕುಡಲಿ ಬೇಡ
ಸತ್ತ ಕುರಿಯನು ರಾಜರೆ ಚಿಟ್ಟಿ ಬರಿಯ ಬ್ಯಾಡಿರಿ
ಸತ್ತ ಕುರಿಯನು ರಾಜರೆ ಹೊತ್ತು ಮಾರುತೆವ್ರಿ
ಕುಲಕ ಕುರುಬರ.......

ಕ್ವಾಟಿ ಮುಲ್ತನಿಬಾಷ ಗೊಡವಡಿ ಇಸ್ಮಾಲ ಖಾದ್ರಿ
ಜಾಗಿರಿ ಕೊಟ್ಟಾರ ಕುರಿಗಳ ಮೈಲಾಕ ಗೌಠಣ ಕೊಟ್ಯಾರ
ಅವರು ಕುರಿಗಳ ಮೈಲಾಕ ಗೌಠಣ ಕೊಟ್ಯಾರ॥
ಕುಲಕ ಕುರುಬರ.......

ಕುರಿನೆ ಮೈಸೂತ ಅವರು ನೆಮತಬಾದಿಗ ಹೊಗ್ಯಾರ
ನೆಮತಬಾದಿ ಕಲಗೊಳು ಕ್ವಾಟಿಗೆ ಖಿಳವ್ಯಾರ
ಕ್ವಾಟಿಯ ಖಿಲವನು ತಿರುಗ್ಯಾಡಿ ನೋಡ್ಯಾರ॥
ಕುಲಕ ಕುರುಬರ.......

(ದ್ರೌಪದಿ ಶಂಕರ ಡೊಮನೆ (೪೦) ಅಷ್ಟೂರ ತಾ॥ ಜಿ॥ ಬೀದರ)

**ಮಹಿಮೆ ಮತ್ತು ಬಾದಷಾರ ಭೇಟ ಕುರಿತಾದ ಹಾಡು**

ಬೊಮ್ಮಗೊಂಡನ ನಾಮ, ನುಡಿದರೆ ಜನ್ಮ ಪಾವನ
ಬೊಮ್ಮಗೊಂಡ ಬಂದಾರ। ಭಕ್ತರ ಉದ್ಧಾರ ಮಾಡ್ಯಾರ ॥

ಕುರಿಗಳ ಕಾಯುತ್ತಾರ । ನಾಯಿಗೊಂದ ಸಂಗಟ ಇಟ್ಟಾರ ।
ಕೈಯಲ್ಲಿ ಬಡಗಿ ಹಿಡಿದಾರ । ಅವರು ದೇವರಾಗಿ ನಿಂತಾರ ॥

ಕೈಯಲ್ಲಿ ಕದರ ಹಿಡಿದಾರ । ಬೊಮ್ಮಗೊಂಡ ಉನ್ನಿನುತಾರ
ಘೊಂಗಡಿ ನೇಯ್ದಾರ । ದೇಶಕ್ಕೆ ಘೊಂಗಡಿ ಹಂಚ್ಯಾರ ॥

ಕುರಿಗಳು ಮೈಸ್ಯಾರ । ಬೀದರಿನ ಬನದೊಳಗೆ ಇರುತ್ತಿದ್ದರ ।
ಭಕ್ತಿಯಿಲಿಂದ ಕುರಿಗಳು ಕಾಯ್ದರ । ಅಡವಿಯಲ್ಲಿ ಇರುತ್ತಿದ್ದರ ॥

ಬಹಮನಿ ರಾಜರ । ದಂಡು ಭೇಟಿಗೆ ಬಂದರ ।
ಬ್ಯಾಸರ ಬಿಸಲಾಗ । ನೀರಡಿಸಿ ನೀರು ಹುಡುಕಿದರ ॥

ಬೊಮ್ಮಗೊಂಡನ ಬಲಿ ಹೋಗ್ಯಾರ । ದಂಡಿಗ ನೀರು ಕೇಳ್ಯಾರ ।
ಬೊಮ್ಮಗೊಂಡ ಅಂದಾರ । ಬಂಡಿ ಕೆಳಗ ಅವನೋಡರಿ ನೀರ ಅಂದಾರ ॥

ಅಷ್ಟಾ ದಂಡು ಹೋಗ್ಯಾರ । ಬಂಡಿಗೆ ತೊಂಡರ ಬಿದ್ದರ ।
ಬಂಡಿಮ್ಯಾಲಕ್ಕೆ ಎದ್ದಿಲ್ಲಾ । ದಂಡಿಗ ನೀರು ಸಿಕ್ಕಿಲ್ಲಾ ॥

ಬೊಮ್ಮಗೊಂಡಗ ಹೇಳ್ಯಾರ । ಬಂಡಿ ಎದ್ದಿಲ್ಲಾ ಅಂದಾರ ।
ಬೊಮ್ಮಗೊಂಡ ಹೋಗ್ಯಾರ । ಬಡಿಗಿಲಿ ಬಂಡಿಯ ಚಿಮ್ಯಾರ ॥

ಬೊಮ್ಮಗೊಂಡ ದಂಡಿಗ ಕುರುದಾರ । ಬಂಡಿ ಕೆಳಗ ನೀರು ತೋರಿಸ್ಯಾರ ।
ಎಲ್ಲರು ನೀರು ಕುಡುದಾರ । ದಂಡು ಸಂತೋಷವಾಗ್ಯಾರ ॥

ಬೊಮ್ಮಗೊಂಡಗ ಸರಕಾರ । ಕರುದು ಕೇಳ್ಯಾರ ।
ಏನು ಬೇಡುತಿ ಅಂದಾರ । ಬೇಡಿದ ಕುಡಲಕ ತಯ್ಯಾರ ॥

ಬೊಮ್ಮಗೊಂಡ ಕೇಳ್ಯಾರ । ಸತ್ ಕುರಿ ಹೊತ್ತ ಮಾರುತ್ತಾಂದರ ।
ಇದಕ್ಕೆ ಸರಕಾರ ಒಪ್ಯಾರ । ಬೊಮ್ಮಗೊಂಡ ಖುಸಿ ಆಗ್ಯಾರ ॥

ಬೊಮ್ಮಗೊಂಡ ಕೇಳ್ಯಾರ । ಬಿದ್ದಪಡಿ ಅಡವಿ ಕುರಿಗಿ ಮೈಲಾಕ ಅಂದಾರ ।
ಕುರಿಗೆ ಚಿಟ್ಟಿ (ಕರ) ಇಲ್ಲದಂಗ । ಮಾಫಿ ಬೊಮ್ಮಗೊಂಡ ಬೇಡ್ಯಾರ ॥

ಸರಕಾರ ಒಪ್ಯಾರ । ಬೊಮಗೊಂಡ ಕೇಳಿದ್ದ ಕೊಟ್ಟಾರ ।
ಟಿಕ್ಸ ಮಾಫಿ ತಂದಾರ । ಜಗತ್ಯಾಕ ಉದ್ಧಾರ ಮಾಡ್ಯಾ ॥

ಬೊಮ್ಮಗೊಂಡ ನಾಮ । ನುಡಿದರ ಪಾವನ
ಬೊಮ್ಮಗೊಂಡ ಬಂದಾರ । ಭಕ್ತರ ಉದ್ಧಾರ ಮಾಡ್ಯಾರ ॥

(ಮಹಾತ್ಮಾ ಬೊಮ್ಮಗೊಂಡೇಶ್ವರರ ಪವಾಡಗಳು : ಸಂ. ಮಾಳಪ್ಪ ಅಡಸಾರೆ)

ಬೊಮ್ಮಗೊಂಡೇಶ್ವರ ದಾರಿಯಲ್ಲಿ ಸಾಗುವ ಹಾಗೂ ಗೊಂಡರ ಕುರಿತ ಹಾಡು :

ನಮ್ಮ ನಿಮ್ಮ ಬಾಂಧವ್ಯ ಇಂದು ಕೂಡುತ್ತಿದೆ ಗೊಂಡ ಸಮಾಜಕ್ಕಾಗಿ
ನಮ್ಮ ದೇವತೆಗಾಗಿ ಪಂಚಧಾತುವಿನಲ್ಲಿ ಬೊಮಗೊಂಡೇಶ್ವರರು
ಬರುತ್ತಿರುವರು ಮಹಾ ದಾರಿಯಲ್ಲಿ.

ನಾಡಿನ ಲಕ್ಷಗಟ್ಟಲೇ ಭಕ್ತರ ಭಕ್ತಿಯ ನೆಲೆಸಲು ಬರುತ್ತಿರುವರು
ದಾರಿ ತೋರಲು, ಹೆಗಲ ಮೇಲೆ ಕಂಬಳಿ ಹೊತ್ತು ಕೈಯಲ್ಲಿ
ಕುರಿ ಕಾಯುವ ಬಡಿಗೆ ಹಿಡಿದು ನಿಂತುರುವರು.

ಎಂತಹ ಸುಂದರ ಸ್ಥಳದಲ್ಲಿ ಸುಳಿದಿರುವರು ಜನರ ಮನದಾಳದಲ್ಲಿ
ಸೌಂದರ್ಯ ಸಹಿ ಜೇನು ತುಂಬು ನಿಷ್ಠೆಯ
ಮಾರ್ಗ ತೋರಲು ಈ ನಾಡಿನಲ್ಲಿ.

ಶಿಲಾ ಮೂರ್ತಿಯಾಗಿ ಅವತಾರ ತಾಳಿ ಬರುತ್ತಿರುವರು ಶಾಂತಿ
ಮಾರ್ಗದಲ್ಲಿ ಬೊಮ್ಮಗೊಂಡೇಶ್ವರ ತೋರುವ ದಾರಿಯಲ್ಲಿ
ಸಾಗುವ ಬನ್ನಿರಿ ಈ ದಾರಿಯಲ್ಲಿ.

ಈ ಮೂಢ ನಂಬಿಕೆಗಳಿಗೆ ಮುತ್ತಿಗೆ ಹಾಕಿ, ಅಧರ್ಮ, ಅನ್ಯಾಯ,
ಅತ್ಯಾಚಾರ, ಕಿತ್ತೊಗೆಯುವ ಧರ್ಮ, ನ್ಯಾಯ ಸದಾಚಾರ, ನೆಲೆಸುವ
ಬೊಮ್ಮಗೊಂಡೇಶ್ವರ ಮಾರ್ಗದಲ್ಲಿ ಸಾಗೋಣ ಬನ್ನಿರಿ.

(ಮಹಾತ್ಮ ಬೊಮ್ಮಗೊಂಡೇಶ್ವರ ಪವಾಡಗಳು : ಸಂ. ಮಾಳಪ್ಪ ಅಡಸಾರೆ)

**ಬೊಮ್ಮಗೊಂಡೇಶ್ವರರ ಜಾತ್ರೆ ಕುರಿತ ಹಾಡು :**

ಭಾರತ ಹುಣ್ಣಿಮೆ ಬರಲು ಸಂತಸ ಎಲ್ಲರಿಗೆ
ಬಂಡಿ ಕಟ್ಟುತ್ತ ಬರುವರು ಬೊಮ್ಮಗೊಂಡನ ಜಾತ್ರೆಗೆ
ದೇವಾತ್ಮನ ದೇವಾಲಯ ಇವನು ಗೊಮ್ಮಗೊಂಡೇಶ್ವರ
ಮಹಾತ್ಮ ಬೊಮ್ಮಗೊಂಡೇಶ ॥

ಸಕಲರ ಜೀವಕ್ಕೆ ಲೇಸನ್ನು ಬಯಸುವ ದಿವ್ಯ ಮಹಾತ್ಮ।
ತಾಯಿಯಂತೆ ನಮ್ಮನು ಪ್ರೇಮದಿಂದ ಸಲಹುವನು ।
ನೋವೆನೆ ಬಂದರೂ ಕ್ಷಣದಿ ದೂರ ಮಾಡುವನು
ನಂಬಿರುವ ಭಕ್ತರಿಗೆ ಜ್ಞಾನದ ಧಾರೆಯ ಎರೆಯುವನು
ಸದ್ಭಕ್ತರ ಸುರದಾತ್ಮನು ಈ ಬೊಮ್ಮಗೊಂಡೇಶ್ವರ ಸಲಹುವ ಜಗದೀಶ ॥
ಭಾರತ ಹುಣ್ಣಿಮೆ ಬರಲು ..... ॥

ಚಿಂತೆಯ ಮಾಡುವ ಮನುಜರಲಿ ಚೇತನವನ್ನು ತುಂಬುವನು ।
ಕ್ರಾಂತಿಯನು ಓಡಿಸಿ ಶಾಂತಿಯನು ನೀಡುವನು।
ಮನುಕುಲದ ರಕ್ಷಣೆಗೆ ಜೀವನದ ಮುಡಿಪಿಟ್ಟವನು
ದುರ್ಜನರ ಸೊಕ್ಕನು ಮೂಲದಿ ತೆಗೆದ ಮಹಾತ್ಮನು
ಭೂ ಲೋಕದ ಮಹಾದೇವನು
ಈ ಬೊಮ್ಮಗೊಂಡೇಶ್ವರ ಮಹಾಮಹಿಮೆ ಪುರುಷ ॥
ಭಾರತ ಹುಣ್ಣಿಮೆ ಬರಲು ......॥

(ಧ್ವನಿ ಸುರಳಿ 'ಬೊಮ್ಮಗೊಂಡೇಶ್ವರರ ಪವಾಡಗಳು'
ಸಾಹಿತ್ಯ - ಮಾಳಪ್ಪ ಅಡಸಾರೆ)

**ಶಿವನು ಬೊಮ್ಮಗೊಂಡೇಶ್ವರನಿಗೆ ಪರೀಕ್ಷೆ ಮಾಡಿದ ಕುರಿತಾದ ಹಾಡು :**

ಕೈಲಾಸದಿಂದಿಳಿದು ಶಿವನು ಭೂಮಿಮ್ಯಾಲೆ ಬಂದ।
ಬೊಮ್ಮಗೊಂಡೇಶನ ಪರೀಕ್ಷೆ ಮಾಡಲು ಶಿವ ಬಂದ ॥

ಬ್ಯಾಸಗಿ ದಿನದಾಗ ಕುರಿಗಳ ಮೇಯಿಸುತಾ
ಬೊಮ್ಮಗೊಂಡೇಶ ಹೊಳಿಕಡೆ ಹೋದ
ನೀರಿಲ್ದ ಹೋಳಿಯಾಗ ರಾತ್ರಿ ಇವನು ಕುರಿಗಳ ಕೂಡಿಸಿ ವಸ್ತಿಯನ್ನಿಟ್ಟ
ಒಂದು ದಿನ ಸಂಜೆಯ ವ್ಯಾಳಿದಾಗ ಪರಮಾತ್ಮನು ಬಂದ ಶಿವ ಶಿವ
ಕೈಲಾಸದಿಂದಿಳಿದ ಶಿವನು ॥

ಗುಡುಗಿನ ಸಪ್ಪಳ ಕೇಳಿದ ಶಿವನು
ಬೊಮ್ಮಗೊಂಡೇಶನ ಹಿಂಗಂತಾನು
ಮಳೆ ಬರುತೈತಿ ಬೊಮ್ಮಗೊಂಡ
ಬ್ಯಾರೆ ಕಡಿ ಕುರಿಗಳ ಕೂಡಿಸು ಅಂದ
ಸ್ವಾಮಿ ಇಂದ ಮಳೆ ಬರುದಿಲ್ಲ ಅಂದ ಬೊಮ್ಮಗೊಂಡ ಹರ ಹರ ॥
ಕೈಲಾಸದಿಂದಿಳಿದು ಶಿವನು ..... ॥

ಮೂರುದಿನಯಾದ ಮೇಲೆ ಹೋಳಿಯಾನ ದಡ್ಡಿಯ
ಬಲಿಯ ಹಿಂತಗೊಂಡ ಬೊಮ್ಮಗೊಂಡ ಹೊಂಟ
ಶಿವ ಬಂದು ಕೇಳತಾನ ಯಾಕ ಹೊಂಟೆ ಅಂತ
ಬೊಮ್ಮಗೊಂಡ ಕೇಳತಾನ ಮಳೆ ಬರುತೈತಿ ಅಂತ
ಬೊಮ್ಮಗೊಂಡೇಶನ ಮಾತನು ಕೇಳಿ ಆಶ್ಚರ್ಯಗೊಂಡ ಪರಮಾತ್ಮ ಶಿವ ಶಿವ ॥
ಕೈಲಾಸದಿಂದಿಳಿದು ಶಿವನು ..... ॥

ಮಳಿ ಬರುವದು ತಿಳಿದು ಬೊಮ್ಮಗೊಂಡೇಶನ
ಜ್ಞಾನ ಕಂಡ ಪರಮಾತ್ಮ ಸಂತಸಗೊಂಡ
ಕುರುಬರಿಗೆ ಮಳೆರಾಯ ಸಿಕ್ಕನಂತ ಆಸಿರ್ವಾದ ಮಾಡಿಸಿದ ಕೈಲಾಸಕ್ಕೆ ಹೋದ
ಬೊಮ್ಮಗೊಂಡೇಶ ಪವಾಡ ಮಾಡಿ ಭೂಮಿಮ್ಯಾಲ ಮೆರೆದ ಹರ ಹರ ॥
ಕೈಲಾಸದಿಂದಿಳಿದು ಶಿವನು ..... ॥

ಎರಡು ಮೂರು ದಿವಸ ಇದ್ದು ವಾದವ ಮಾಡಿ
ಪರಮಾತ್ಮ ಮೇಘರಾಜನ ಹತ್ತಿರ ಹೋದ
ನಾಳೆ ಸಂಜೆ ಮುಂದ ಮಳಿ ಸುರಿಸು ಅಂದ
ಮೇಘರಾಜನ ಒಂದಿಂದಾಗ ಮಳಿ ಬರುವದಿಲ್ಲ ಅಂದ
ಮೂರು ದಿವಸ ಆದಮ್ಯಾಲ ಮಳಿ ಸುರಿಸುವೆನು ಅಂದ ಮೇಘರಾಜ ಶಿವ ಶಿವ ॥

ಬೊಮ್ಮಗೊಂಡೇಶನ ಪರೀಕ್ಷೆ ಮಾಡಿ ಶಿವನಲ್ಲಿಂದ
ಪರಮಾತ್ಮನ ಕೃಪೆಯ ಪಡೆದ ಬೊಮ್ಮಗೊಂಡೇಶ ॥
ಕೈಲಾಸದಿಂದಿಳಿದು ಶಿವನು ..... ॥

(ಧ್ವನಿ ಸುರಳಿ 'ಬೊಮ್ಮಗೊಂಡೇಶ್ವರರ ಪವಾಡಗಳು'
ಸಾಹಿತ್ಯ - ಮಾಳಪ್ಪ ಅಡಸಾರೆ)

**ಬೊಮ್ಮಗೊಂಡೇಶ್ವರರ ಕೆರೆಯ ಕುರಿತ ಹಾಡು :**

ಬೀದರ ಕೋಟೆ ಒಳಗೆ ಐತಿ ಬೊಮ್ಮಗೊಂಡನ ಕೆರೆಯು
ಶರಣು ಶರಣು ಬೊಮ್ಮಗೊಂಡೇಶ ಭೂಮಿಗೆ ಬಂದ ಜಗದೀಶ
ಅಲ್ಲಿ ಸ್ನಾನ ಮಾಡಲು ನಿನಗೆ ದೊರೆವುದು ಮುಕ್ತಿಯು
ತಮ್ಮ ದೊರೆಯುವುದು ಮುಕ್ತಿಯು
ಶರಣು ಶರಣು ಬೊಮ್ಮಗೊಂಡೇಶ ॥

ಕೋಟೆ ನಡು ಕೆರೆ ಕಟ್ಟಿಸ್ಯಾರ
ಇಲ್ಲಿ ಝುಳಕ ಮಾಡು ಒಮ್ಯಾರ
ಮೈಯಾನ ಬ್ಯಾನಿ ಬ್ಯಾಸರ ಆಗತಾವ ಇಲ್ಲಿ ಪರಿಹಾರ
ಗಾಳಿ ಪಿಶಾಚಿ ಹಿಡಿದಿದ್ದರೆ ಬಿಟ್ಟ ಒಡತಾವ ಭಾಳದೂರ ॥
ಬೀದರ ಕೋಟೆ ಒಳಗ.....॥

ಕೆರಿ ನಡು ಭಾವಿ ಐತಂತ
ಭಂಗಾರ ಮೂರ್ತಿ ಅಲ್ಲಿ ಇತ್ತಂತ
ಮೂರ್ತಿ ದಿವಸ ಮುಕುತ ಮಾರುತ ಅನ್ನದಾಸೋಹ ಮಾಡಿಸುತ
ಬರಗಾಲದಾಗ ಅನ್ನ ನೀಡಿ ಬೊಮ್ಮಗೊಂಡನಾದ ಭಗವಂತ ॥
ಬೀದರ ಕೋಟೆ ಒಳಗ.....॥

(ಧ್ವನಿ ಸುರಳಿ 'ಬೊಮ್ಮಗೊಂಡೇಶ್ವರರ ಪವಾಡಗಳು'
ಸಾಹಿತ್ಯ - ಮಾಳಪ್ಪ ಅಡಸಾರೆ)

**ಬೊಮ್ಮಗೊಂಡೇಶ್ವರರ ಜೀವನ ಹಾಗೂ ಪವಾಡ ಕುರಿತ ಹಾಡು :**

ಧರೆಗಿಳಿದು ಬಂದನು ಬೊಮ್ಮಗೊಂಡೇಶನು
ಹರನವರವನು ಪಡೆದ ಪುರುಷನು
ಗೊಂಡ ಜನಗ ಉದ್ಧಾರಕನು
ಹರನ ವರವನು ಪಡೆದ ಪುರುಷನು॥

ಕರುನಾಡ ಕಳಸದಂತೆ ಬೀದರ ಜಿಲ್ಲೆ
ಶಿವುಗೊಂಡ ಗಂಗಮ್ಮ ಬಾಳುತ್ತಿದ್ದರಲ್ಲೆ
ಪರಮಾತ್ಮನ ಕೃಪೆಯಿಂದ ಇವರ ಕಂದನಾಗಿ
ಬೊಮ್ಮಗೊಂಡ ಜನಿಸಿ ಬಂದ ಅರಸು ಪುತ್ರನಾಗಿ.
ಪವಾಡ ಪುರುಷ ಇವನೆಂದ ಸಿದ್ಧಮಾಳಗೊಂಡ
ಮಹಾಮಹಿಮನಾಗಿ ಬೆಳೆದ ಬೊಮ್ಮಗೊಂಡ॥
ಧರೆಗಿಳಿದು ಬಂದನು.....॥

ಕುರಿ ಕಾಯುವ ಕಾಯಕವ ನಿತ್ಯ ಮಾಡುತ್ತಿದ್ದ
ಕುರಿ ತಿನ್ನಲು ತೋಳವೊಂದು ಬಂದದ್ದನ್ನು ಕಂಡ
ತೋಳವನ್ನು ತನ್ನ ಹತ್ತರ ಊಗಿ ಇವನು ಕರೆದ
ತೋಳ ಅಲ್ಲಿ ಬಂದಾಗ ಮಾತೊಂದು ಹೇಳಿದ
ಮೈಲಾರ ಮಲ್ಲಣ್ಣನ ನಾಯಿ ಕರಿತಿನಂದ
ಈ ಮಾತು ಕೇಳಿ ತೋಳ ಓಡಿ ಹೋಯಿತು ಜಿಗಿದ ॥
ಧರೆಗಿಳಿದು ಬಂದನು.....॥

ಅಂದಿನಿಂದ ಇಂದಿನ ತನಕ ಗೊಂಡ ಜನಗಳು
ಕುರಿ ಕಾಯಲು ನಾಯಿಯನ್ನು ಕರಕೊಂಡು ಹೋಗುತಾರ
ಹಬ್ಬದ ದಿನದಾಗ ನಾಯಿಯನ್ನು ಪೂಜೆ ಮಾಡುತಾರ
ಮಲ್ಲಣ್ಣನ ರೂಪದಂಗ ನಾಯಿ ಕಾಣುತಾರ
ಬೊಮ್ಮಗೊಂಡನ ಈ ಮಹಿಮೆ ಕೊಂಡಾಡತಾರ
ಕುರಿ ಕಾಯುವ ಕಾಯಕದಾಗ ಕೈಲಾಸ ಕಂಡವರು॥
ಧರೆಗಿಳಿದು ಬಂದನು.....॥

(ಧ್ವನಿ ಸುರಳಿ 'ಬೊಮ್ಮಗೊಂಡೇಶ್ವರರ ಪವಾಡಗಳು'
ಸಾಹಿತ್ಯ - ಮಾಳಪ್ಪ ಅಡಸಾರೆ)

(೧) ಶ್ರೀ ಗುರುವೆ ಗುರುವೆ ಗುರುವೆ
ಕಲ್ಪ ತರುವೆ ತರುವೆ
ಕರುಣಾ ಸಾಗರವೆ ಆಗರವೆ
ಮುಕ್ತಿದಾಗರವೆ ಆಗರವೆ
ಭವಹರ ಭಯಹರ ಶಿವಹರ ಶಿವಹರ
ಶ್ರೀ ಗುರು ವೀರ ಸಂಗಯ್ಯ ನಿನೋಲಿದು
ಸಲಹೋ ಬಸವಣ್ಣ ॥

(೨) ಆದಿಯಲ್ಲಿ ಸುಖವಿಲ್ಲದುದಕ್ಕೆ
ಸುಖವ ಹುಡುಕುತ್ತ ಬಂದೆನಣ್ಣ
ಆದಿಯಲ್ಲಿ ಗುರುವಿಲ್ಲದುದಕ್ಕೆ
ಗುರುವ ಹುಡುಕುತ್ತ ಬಂದೆನಣ್ಣ
ಆದಿಯಲ್ಲಿ ಲಿಂಗವಿಲ್ಲದುದಕ್ಕೆ
ಲಿಂಗವ ಹುಡುಕುತ್ತ ಬಂದೆನಣ್ಣ
ಆದಿಯಲ್ಲಿ ಅನುಭವ ಇಲ್ಲದುದಕ್ಕೆ
ಅನುಭವವ ಹುಡುಕುತ್ತ ಬಂದೆನಣ್ಣ
ಆದಿಯಲ್ಲಿ ನೀವು ಇಲ್ಲದ ಕಾರಣ
ನಿಮ್ಮ ಪಾದವ ಹುಡುಕುತ್ತ ಬಂದು
ನಿಮ್ಮ ದಿವ್ಯ ಶ್ರೀ ಪಾದವ ಕಂಡು
ಶ್ರೀ ಗುರು ವೀರ ಸಂಗಯ್ಯನಲ್ಲಿ
ನಮೋ ನಮೋ ಎಂದೆನು ಬಸವಣ್ಣ

(೩) ಗುಗ್ಗುಳ ಕರ್ಪೂರವೆನ್ನಲಿಲ್ಲ
ಕುರಿಹಾಲು ಕೆನೆಮೊಸರು ಸಂಗಯ್ಯ
ನೀನೊಲಿದುಂಡರೆ ನಾ ತೃಪ್ತಿ
ಹುಣಸೆ ಹಣ್ಣಿನ ಖಾರ ಮಜ್ಜಿಗೆ ಅಂಬಲಿ ಮಾಡಿ
ರೊಟ್ಟಿ ಮೀಸಲು ನೀನೆಇದುಂಡರೆ ನಾ ತೃಪ್ತಿ
ಶ್ರೀ ಗುರು ವೀರ ಸಂಗಯ್ಯ
ನೀನೊಲಿದಾವಾಗ ಉಂಬುವೆನೆಂದು
ದಾರಿ ಕಾಯುತಿರ್ದೆನಯ್ಯ ಬಸವಣ್ಣ

(೪) ಹೋತಿನ ಸಂಗಡವಿಡಿದು ಹೋತವಾಗಲು ಬೇಡ
ಓತು ಗುರುವಿಂಗೆ ಶರಣಾಗು
ಮಾತು ಮಾತಿಂಗೆ ಮಾತು ಮಾತಿಂಗೆ
ಶಿವನೆಂದವನ ಪಾಪ ಶ್ರೀ ಗುರು ವೀರ ಸಂಗಯ್ಯನ
ಕೃಪೆಯಿಂದ ಬಿದ್ದು ಹೋಗುವುದು ಬಸವಣ್ಣ

(೫) ಬರಗಾಲ ಬಂದರೂ ಹರ ನೀವೇ ಗತಿ
ಉರಿಗಾಲ ಬಂದರೂ ಶಿವ ನೀವೇ ಗತಿ
ಸುಖ ಬರಲೂ ಅದು ನೀವೇ ಗತಿ
ಕುರಿ ಸುಖವ ನನಗೆ ನನ ಸುಖ ಕುರಿಗೆ
ನನ್ನ ಕುರಿಗಳ ಸುಖಕ್ಕೆಲ್ಲ ನೀವೆ ನೊಡಾ
ಶ್ರೀ ವೀರಸಂಗಯ್ಯ ನಿಮ್ಮ ಬೆಳಗಿನೊಳಗೆ
ನಾನು ಬಸವಣ್ಣ

(೬) ಹರ್ ಹರ್ ಎನ್ನುತ್ತ ಮರಗಳು ಬಡಿ ಬಡಿದು
ಕುರಿಗಳ ಕಾಯುವುದೇನ್ನ ಕಾಯಕ
ಕುರಿಗಳಲ್ಲಿ ಹರಹರ ಕುರಿಕಾಯುವವರಲ್ಲಿ ಹರಹರ
ಮರದಲ್ಲಿ ಹರಹರ ಮರದಡಿಯಲ್ಲಿ ಹರಹರ
ಗುರು ವೀರ ಸಂಗಯ್ಯ ನಿಮ್ಮ ಚರಣವ ಪಿಡಿದು
ಸರ್ವರೋಳ ಹರನ ಕಂಡೆನಯ್ಯ ಬಸವಣ್ಣ

(೭) ಸಂಸಾರವೆಂಬ ಬೇಲಿಯನೆ ಬಡಿಯುತ್ತ
ಕಾಲನ ಕೆಡುಹಲು ಕೋಲು ಹಿಡಿದೆನಣ್ಣ
ಮರುವಿನ ಚಿಲವ ಮಗ್ಗುಲಿಗಿಕ್ಕಿ
ಕಾಲ ಚಕ್ರವನ್ನು ತಿರುಗಿಸುತ
ನೀಲಕಂಠನ ನೆನೆ ನೆನೆದು ಜಾಲವ ಹರಿದೆನಣ್ಣಾ
ಪಾಲಿಸುವ ಶ್ರೀ ಗುರು ವೀರಸಂಗಯ್ಯ ಒಲಿದು ಬಂದರೆ
ಕಾಲ ಮೇಲೆರಗಿ ಕಾಲವನು ಬಸವಣ್ಣ.

(೮) ಕುರಿಯ ಕಾಯೋ ಶಿವ ಶಿವ
ಕುರಿಯ ಮರಿಯ ಕಾಯೋ ಶಿವ ಶಿವ
ಕುರುಬನ ಕಾಯೋ ಶಿವ ಶಿವ
ಕುರುಬನ ಕುಲವ ಕಾಯೋ ಶಿವ ಶಿವ
ಅಶನಕ್ಕೆ ಬೆಲಿಯ ಜಾಲಿಯ ಮೆಲಿದರೆ
ತೃಷೆ ತೀರಿಸಲು ಜಲವಿಲ್ಲ ಬರಗಾಲ ಜಗವ ನುಂದದರೆ
ಶ್ರೀ ಗುರು ವೀರಸಂಗಯ್ಯ ಜಂಗಮನಾಗಿ ಬಂದು
ಸಲಹಿದ ಕಾಲಕ್ಕೆ ಸುಖಿಯಾದೆನು ಬಸವಣ್ಣ.

(೯) ಹತ್ತು ಮರಿಯನು ಕೊಟ್ಟು
ಒಂದು ಬಲೆಯನು ಕೊಂಡೆನಣ್ಣ
ಎಂಟು ಕುರಿಯನು ಕೊಟ್ಟು
ಒಂದು ಬೆತ್ತವ ಕೊಂಡೆನಣ್ಣ
ಆರು ಟಗರವ ಕೊಟ್ಟು
ಒಂದು ತೋಳವ ಕೊಂಡೆನಣ್ಣ
ಮೂರು ಹೊತವ ಕೊಟ್ಟು
ಮುಗುದಾಣಿಯ ಕೊಂಡೆನಣ್ಣ
ನಾನೇನು ಮಾಡಲಿ ನಾಮಾಡುವ ಕೆಲಸ
ತಾನೆ ಮಾಡಿಕೊಂಡವು
ನಾನು ಶ್ರೀ ಗುರು ವೀರಸಂಗಯ್ಯನ ಕೃಪೆಯಿಂದ
ಸುಮ್ಮನಾಗಿರ್ದೆನು ಬಸವಣ್ಣ

(೧೦) ಕಾಮ ಕ್ರೋಧವ ತುಳಿದು
ಲಾಭ ಮೋಹಗಳಿಗೆ ಬಡಿದೋಡಿಸಿ
ಮದ ಮತ್ಸರಗಳಿಗೆ ಎಣಿಸದೆ
ದರಿದ್ರರಿಗೆ ದಾಸೋಹಗೈದು
ಗುರು ವೀರಸಂಗಯ್ಯನ
ನೆನೆದೆನು ನಾನು॥

(೧೧) ಶ್ರೀ ಗುರು ವೀರಸಂಗಮನ ಬಣ್ಣಿ
ಬಣ್ಣಿಸುವದೆಂತು ಸಾಧ್ಯವೋ
ಸೂಳೆಯ ಮನೆಯಲ್ಲುಂಡು ಅವಳ
ದೀಕ್ಷೆಯಗೈದು ಶಿವಶರಣೆಯನ್ನಾಗಿ ಮಾಡಿದ
ಕಾಮಗನ ಮನೆಯಲ್ಲುಂಡು ಅವನ
ಜಂಗಮ ದಾಸೋಹಿಯಾಗಿ ಮಾಡಿದ
ವೈರಿ ಭಾಸ್ಕರಂಗೆ ಲಿಂಗ ದೀಕ್ಷೆಯ ತೆತ್ತು
ಮೈದುನನ್ನಾಗಿ ಮಾಡಿಕೊಂಡ
ಮೃತಪಟ್ಟವಂಗೆ ಮರಳಿ ಪ್ರಾಣವತೆತ್ತು.
ಪರುಷತ ಪುತ್ಥಳಿ ಪತಿತಪಾವನ ಮೂರ್ತಿ
ಶ್ರೀ ಗುರು ವೀರ ಸಂಗಯ್ಯನ ಶ್ರೀ ಪಾದಕ್ಕೆ
ನಮೋ ನಮೋ ಎಂದು ಬದುಕಿದೆನು ಬಸವಣ್ಣ.

## ಗಾಣಿಗೇರ ಸಿದ್ದಪ್ಪನ ವಚನ

(೧೨) ಎಲೆ ಗಾಣಿಗರ ಸಿದ್ಧ, ಕಾಲೊಳಗೆ ಎಣ್ಣೆ
ಹಿಂಡ್ಹಿಂಡಿ ತೆಗೆಯುವಂತೆ
ಹಿಂಡಿ ತೆಗೆ ನೀ ದುರ್ಗುಣವ
ಶಾಪ ಕಡೆಗಾಯ್ತು ಪಾಪ ಲೋಪವಾಯ್ತು
ಓಂ ಕಾರ ನಾದಬಿಂದು ಒಂದಾದಂತೆ
ಲಿಂಗ ಲೀಲೆಯೊಳಗೆ ನೀನಾದೆ
ಎಲೋ ಸಿದ್ಧ, ನಿನ್ನ ಉದ್ಧಾರ
ಮಾಡಿಕೊಂಡು ಆಗಿರುವೆ ಶುದ್ಧ
ಶ್ರೀ ಗುರುವೀರಸಂಗಯ್ಯನ ಪಾದದಲ್ಲಿ
ನೀನೆಂದೆಂದು ಪ್ರಬುದ್ಧ ॥

(೧೩) ಬಿದನೂರು ಪಟ್ಟಣದೊಳಗೆ ಶಿವಶರಣ
ಮಹಾತ್ಮ ಬೊಮ್ಮಗೊಂಡೇಶ್ವರರ
ಮಹಿಮೆ ಎಣಿಸುವುದಕ್ಕಾವ
ಗಣನೆಯಿಲ್ಲ ॥
ಆದಿ, ಮಧ್ಯ, ಅಂತ್ಯಗಳ ತ್ರಿಕಾಲಜ್ಞಾನಿ
ವೇದ, ಶಾಸ್ತ್ರ ಪುರಾಣಾಗಮ
ಉಪನಿಷತುಗಳ ಗಂಗೋತ್ರಿ ॥
ಹದಿನೆಂಟು ಪುರಾಣಗಳ ಬೆರಳಕ್ಷರ
ಜ್ಯೋತಿಷ್ಯ ಶಾಸ್ತ್ರಸಂಜ್ಞೆಯಲ್ಲಿ ॥
ಹಣೆಯೊಳಗೆ ಬರೆದ ಬ್ರಹ್ಮಾಂಡ ಜ್ಞಾನ
ಹಣೆಯ ಮೇಲೆ ವಿಭೂತಿ ॥
ಕೊರಳಿಗೆ ಲಿಂಗ ರುದ್ರಾಕ್ಷಿ
ನುಡಿಯೊಳಗೆ ಶಿವಮಂತ್ರ ॥
ಹಸ್ತದೊಳಗೆ ಡಮರುಗ ದಂಡ
ಭುಜಕ್ಕೆ ಕಂಬಳಿ, ದಾಸೋಹ ಪಾತ್ರೆ॥
ನಿಜಗುರು ಶಿವಶರಣ ಸಿದ್ಧೇಶ್ವರಾ
ಮಹಾಶಿವಶರಣ ಶ್ರೀ ಮಹಾತ್ಮ
ಬೊಮ್ಮಗೊಂಡೇಶ್ವರರ
ದರ್ಶನದಿಂದೆನ್ನ ಜನ್ಮ ಜನ್ಮಾಂತರದ
ಪಾಪವಡಗಿ ಇಂದೆನ್ನ
ಜನ್ಮ ಸಾರ್ಥಕವಾಯಿತು ॥

(ಸಂಗ್ರಹ : ನಾಗಪ್ಪ ಚಿದ್ರಿ,
ಈ ವಚನಗಳು ಶಾಮತಲಿಂಗ ಸ್ವಾಮಿ ಲಾಡಗೇರಿಯವರಿಂದ ಪಡೆದಿರುತ್ತೇನೆ)

(೧೪) ಬೊಮ್ಮಗೊಂಡನ ಕೆರಿಮ್ಯಾಲ
ಹುರದಳ್ಳು ಆದಾತಣ್ಣ
ಲೆಕ್ಕಿಲ್ಲದ ಕರಿಗಾಗಿ ಒಂದು
ಕೀಲಾದ (ಕೋಟೆ) ಮ್ಯಾಲ ನೀರ
ಕೊಂಡಾತಣ್ಣ

('ಬೀದರ ಜಿಲ್ಲಾ ದರ್ಶನ' - ಸಂ. ಡಾ॥ ಜಗನ್ನಾಥ ಹೆಬ್ಬಾಳೆ, ಪು. ೧೧೯)

## ಅನುಬಂಧ - ೨
## ಮೂರ್ತಿ ಸ್ಥಾಪನೆ ಕುರಿತ ಮಾಹಿತಿ ಪಟ್ಟಿ
## ಬೀದರ ತಾಲೂಕು

| ಕ್ರ. ಸಂ. | ಊರು | ಬಳಸಿದ ವಸ್ತು | ಉದ್ಘಾಟಕರು | ದಿನಾಂಕ |
|---|---|---|---|---|
| ೧. | ಬೀದರ ನಗರ | ತಗಡು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | ೯-೦೫-೨೦೦೩ |
| ೨. | ಅತಿವಾಳ | ಸಿಮೆಂಟು | ಎಚ್.ಎಂ. ರೇವಣ್ಣ<br>ಮಾಜಿ ರೇಷ್ಮೆ ಸಚಿವರು | ೯-೦೫-೧೯೯೨ |
| ೩. | ಕೊಳಾರ (ಕೆ) | ಸಿಮೆಂಟು | ಎಂ.ವಿ.ವೇದಮೂರ್ತಿ<br>ಸಹಾಯಕ ಕಮಿಷ್ನರ(೧೯೯೨) | ೯-೦೭-೧೯೯೨ |
| ೪. | ಚಿಮಕೋಡ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | ೩-೦೬-೧೯೮೨ |
| ೫. | ಮಲ್ಕಾಪುರ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | ತಿಳಿದು ಬಂದಿಲ್ಲ |
| ೬. | ಫತ್ತೇಪೂರ | ಸಿಮೆಂಟು | ಸಿದ್ಧರಾಮಯ್ಯ<br>ಮಾಜಿ ಉಪ ಮುಖ್ಯಮಂತ್ರಿ | '' |
| ೭. | ಕಮಠಾಣಾ | ತಗಡು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೮. | ಮಾಳೆಗಾಂವ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೯. | ಜನವಾಡಾ | ತಗಡು | ತಿಳಿದು ಬಂದಿಲ್ಲ | '' |
| ೧೦. | ಅಲಿಯಂಬರ | ಸಿಮೆಂಟು | ಎಚ್.ಎಂ. ರೇವಣ್ಣ<br>ಮಾಜಿ ರೇಷ್ಮೆ ಸಚಿವರು | '' |
| ೧೧. | ಯರನಳ್ಳಿ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |

| ಕ್ರ. ಸಂ. | ಊರು | ಬಳಸಿದ ವಸ್ತು | ಉದ್ಘಾಟಕರು | ದಿನಾಂಕ |
|---|---|---|---|---|
| ೧೨. | ನವಲಾಸಪುರ | ತಗಡು | ಬೀರಪ್ಪಾ<br>ಮಾಜಿ ಗ್ರಾಮ ಪಂಚಾಯತ್ ಸದಸ್ಯರು | ತಿಳಿದು ಬಂದಿಲ್ಲ |
| ೧೩. | ಕಂಗಟಿ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೧೪. | ಅಲ್ಲಾಪುರ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೧೫. | ಚಿಲ್ಲರ್ಗಿ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೧೬. | ಸಿಂದೋಲ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |

## ಹುಮನಾಬಾದ ತಾಲೂಕು

| ಕ್ರ. ಸಂ. | ಊರು | ಬಳಸಿದ ವಸ್ತು | ಉದ್ಘಾಟಕರು | ದಿನಾಂಕ |
|---|---|---|---|---|
| ೧. | ನಂದಗಾಂವ | ಸಿಮೆಂಟು | ಸಿದ್ಧರಾಮಯ್ಯ<br>ಮಾಜಿ ಉಪಮುಖ್ಯಮಂತ್ರಿ | ೯-೧೨-೨೦೦೩ |
| ೨. | ಹಳ್ಳಿಖೇಡ (ಬಿ) | ತಗಡು | ಮಾಳಪ್ಪ ಅಡಸಾರೆ<br>ಕಾರ್ಯದರ್ಶಿ ಜಿಲ್ಲಾ ಸಂಗೊಳ್ಳಿ ರಾಯಣ್ಣ<br>ತರುಣ ಗೊಂಡ ಸಂಘ ಬೀದರ | ತಿಳಿದು ಬಂದಿಲ್ಲ |
| ೩. | ಮದರಗಿ | ತಗಡು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೪. | ಚಿನಕೇರಾ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೫. | ಹಂದಿಕೇರಾ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೬. | ವಡ್ಡನಕೇರಾ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೭. | ಬೇವಿನ ಚಿಂಚೋಳಿ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೮. | ಮಲ್ಕಾಪುರ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೯. | ಸಿತಾಳಗೇರಾ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೧೦. | ಕಬೀರಬಾದವಾಡಿ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೧೧. | ಮೊಳಕೇರಾ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೧೨. | ಮನ್ನಾ ಎಖೆಳ್ಳಿ | ತಗಡು | ರಘುನಾಥ ರಾಮಗೊಂಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೧೩. | ಕನಕಟ್ಟಾ | ತಗಡು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೧೪. | ಹುಣಚಗೇರಾ | ತಗಡು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |

# ಭಾಲ್ಕಿ ತಾಲೂಕು

| ಕ್ರ. ಸಂ. | ಊರು | ಬಳಸಿದ ವಸ್ತು | ಉದ್ಘಾಟಕರು | ದಿನಾಂಕ |
|---|---|---|---|---|
| ೧. | ಕೊನಮೆಳಕುಂದಾ | ಸಿಮೆಂಟು | ಡಿ.ದೇವರಾಜ ಅರಸ ಮಾಜಿ ಮುಖ್ಯಮಂತ್ರಿ | ೨೧-೧೨-೧೯೮೦ |
| ೨. | ಬಾಜೊಳಗಾ | ಸಿಮೆಂಟು | ಪ್ರಕಾಶ ಖಂಡ್ರೆ ಎಂ.ಎಲ್.ಎ. ಭಾಲ್ಕಿ | ತಿಳಿದು ಬಂದಿಲ್ಲ |
| ೩. | ಹಲಬರ್ಗಾ | ತಗಡು | ಬಂಡೆಪ್ಪ ಖಾಶೆಂಪುರ ಎಂ.ಎಲ್.ಎ. ಬೀದರ. | ೨೪-೧೦-೧೯೯೯ |
| ೪. | ಹಾಲಹಿಪ್ಪರಗಾ | ಸಿಮೆಂಟು | ಪಂಡಿತರಾವ ಚಿದ್ರಿ ಜಿಲ್ಲಾ ಸಂಗೊಳ್ಳಿ ರಾಯಣ್ಣ ತರುಣಗೊಂಡ ಸಂಘ ಬೀದರ | ೧೧-೦೫-೧೯೯೪ |
| ೫. | ಜಾಂತಿ | ಸಿಮೆಂಟು | ಹೆಚ್. ರೇವಣ್ಣ ಮಾಜಿ ಉಪಮುಖ್ಯಮಂತ್ರಿ | ೧೯-೦೫-೧೯೯೪ |
| ೬. | ಬ್ಯಾಲಳ್ಳಿ | ಸಿಮೆಂಟು | ಮಿರಾಜುದ್ದಿನ ಪಟೇಲ್ ಪಶು ಮತ್ತು ಸಂಗೋಪನಾ ಸಚಿವ | ೧೬-೧೧-೨೦೦೪ |
| ೭. | ಲಖಣಗಾಂವ | ತಗಡು | ಅಮೃತರಾವ ಚಿಮಕೋಡೆ ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | ತಿಳಿದು ಬಂದಿಲ್ಲ |
| ೮. | ಸಾಯಗಾಂವ | ಸಿಮೆಂಟು | ಅಮೃತರಾವ ಚಿಮಕೋಡೆ ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೯. | ಪುಣಜಿ | ತಗಡು | ಈಶ್ವರ ಖಂಡ್ರೆ | '' |
| ೧೦. | ವಳಸಂಗ | ಸಿಮೆಂಟು | ಅಮೃತರಾವ ಚಿಮಕೋಡೆ ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೧೧. | ಕಣಜಿ | ತಗಡು | ಭಗವಂತರಾವ | '' |
| ೧೨. | ಚಂದಾಪೂರ | ಸಿಮೆಂಟು | ಬಂಡೆಪ್ಪ ಖಾಶೆಂಪೂರ | ೦೫-೦೧-೨೦೦೦ |
| ೧೩. | ಅಂಬೆಸಾಂಗವಿ | ತಗಡು | ಅಮೃತರಾವ ಚಿಮಕೋಡೆ ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | ತಿಳಿದು ಬಂದಿಲ್ಲ |
| ೧೪. | ಖಟಕಚಿಂಚೋಳಿ | ತಗಡು | ಕೊಳ್ಳೆ ಭೀಮಣ್ಣಾ | ೦೫-೦೧-೨೦೦೦ |

## ಔರಾದ ತಾಲೂಕು

| ಕ್ರ. ಸಂ. | ಊರು | ಬಳಸಿದ ವಸ್ತು | ಉದ್ಘಾಟಕರು | ದಿನಾಂಕ |
|---|---|---|---|---|
| ೧. | ಬಳತ (ಬಿ) | ತಗಡು | ಅಮೃತರಾವ ಚಿಮಕೋಡೆ ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | ತಿಳಿದು ಬಂದಿಲ್ಲ |
| ೨. | ಚಾಂದೋರಿ | ತಗಡು | ಅಮೃತರಾವ ಚಿಮಕೋಡೆ ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೩. | ಔರಾದ (ಪಟ್ಟಣ) | ತಗಡು | ಅಮೃತರಾವ ಚಿಮಕೋಡೆ ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೪. | ಬಳತ (ಕೆ) | ತಗಡು | ಅಮೃತರಾವ ಚಿಮಕೋಡೆ ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೫. | ಸುಂದಾಳ | ತಗಡು | ಅಮೃತರಾವ ಚಿಮಕೋಡೆ ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೬. | ಜಂಬಗಿ | ಸಿಮೆಂಟು | ಅಮೃತರಾವ ಚಿಮಕೋಡೆ ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೭. | ತೋರಣ | ಸಿಮೆಂಟು | ಅಮೃತರಾವ ಚಿಮಕೋಡೆ ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |

## ಬಸವಕಲ್ಯಾಣ ತಾಲೂಕು

| ಕ್ರ. ಸಂ. | ಊರು | ಬಳಸಿದ ವಸ್ತು | ಉದ್ಘಾಟಕರು | ದಿನಾಂಕ |
|---|---|---|---|---|
| ೧. | ಬಸವಕಲ್ಯಾಣ | ತಗಡು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | ತಿಳಿದು ಬಂದಿಲ್ಲ |
| ೨. | ಮಂಠಾಳ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೩. | ನಾರಾಯಣಪುರ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೪. | ಬೇಟಬಾಲ್ಕುಂದ | ತಗಡು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೫. | ಸಿತಾಳಗೇರಾ | ಸಿಮೆಂಟು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೬. | ಸಸ್ತಾಪುರ | ತಗಡು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೭. | ಘಾಟಹಿಪ್ಪರಗಾ | ತಗಡು | ಬಲಭೀಮ ಮಾದನ ಸೂರೆ | '' |
| ೮. | ಇಲ್ಯಾಳ | ತಗಡು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |
| ೯. | ಅಲ್ಲಾಪುರ | ತಗಡು | ಅಮೃತರಾವ ಚಿಮಕೋಡೆ<br>ಮಾಜಿ ಜಿಲ್ಲಾ ಜೆ.ಡಿ.ಎಸ್.ಅಧ್ಯಕ್ಷ | '' |

## ಅನುಬಂಧ - ೨

## ಫೋಟೊಗಳು



ಅತಿವಾಳ ಗ್ರಾಮದ ಬೊಮ್ಮಗೊಂಡೇಶ್ವರ ಮೂರ್ತಿ
ತಾ।। ಜಿ।। ಬೀದರ



ಬಾವಗಿಯ ಗ್ರಾಮದ ಬೊಮ್ಮಗೊಂಡೇಶ್ವರ ಮೂರ್ತಿ
ತಾ।। ಜಿ।। ಬೀದರ



ಬ್ಯಾಲಳ್ಳಿ ಗ್ರಾಮದ ಬೊಮ್ಮಗೊಂಡೇಶ್ವರ ಮೂರ್ತಿ
ತಾ।। ಭಾಲ್ಕಿ, ಜಿ।। ಬೀದರ



ಸಂಗೊಳಗಿ ಗ್ರಾಮದ ಬೊಮ್ಮಗೊಂಡೇಶ್ವರ ಮೂರ್ತಿ
(ಇನ್ನೂ ಪೂರ್ತಿಗೊಂಡಿಲ್ಲ) ತಾ॥ ಜಿ॥ ಬೀದರ



ಜ್ಯಾಂತಿ ಗ್ರಾಮದ ಬೊಮ್ಮಗೊಂಡೇಶ್ವರ ಮೂರ್ತಿ
ತಾ॥ ಭಾಲ್ಕಿ, ಜಿ॥ ಬೀದರ



ಹಾಲಹಿಪ್ಪರಗಾ ಗ್ರಾಮದ ಬೊಮ್ಮಗೊಂಡೇಶ್ವರ ಮೂರ್ತಿ
ತಾ॥ ಭಾಲ್ಕಿ, ಜಿ॥ ಬೀದರ



ಕೋಣಮೆಳಕುಂದಾ ಬೊಮ್ಮಗೊಂಡೇಶ್ವರ ಮೂರ್ತಿ
ತಾ॥ ಭಾಲ್ಕಿ, ಜಿ॥ ಬೀದರ



ಕೌಠಾ (ಬಿ) ಗ್ರಾಮದ ಬೊಮ್ಮಗೊಂಡೇಶ್ವರ ದೇವಾಲಯ, ತಾ॥ ಔರಾದ, ಜಿ॥ ಬೀದರ



ಕೌಠಾ (ಬಿ) ಗ್ರಾಮದ ದೇವಾಲಯದ ಮೂರ್ತಿ ತಾ॥ ಔರಾದ, ಜಿ॥ ಬೀದರ



ಹುಣಜಿ ಗ್ರಾಮದ ಬೊಮ್ಮಗೊಂಡೇಶ್ವರ ಭಾವಚಿತ್ರದೊಂದಿಗೆ ನಿರ್ಮಾಣಗೊಳ್ಳುತ್ತಿರುವ ವೃತ್ತ ತಾ॥ ಭಾಲ್ಕಿ, ಜಿ॥ ಬೀದರ.



ಮದುವೆಯ ಕರೆಯೋಲೆ ಮೇಲಿನ ಬೊಮ್ಮಗೊಂಡೇಶ್ವರರ ಭಾವಚಿತ್ರ



ಅಷ್ಟೂರ ಗ್ರಾಮದ ದೇವಾಲಯ, ತಾ॥ ಜಿ॥ ಬೀದರ.


ಬರೀದಾಬಾದ ಗ್ರಾಮದ ಬೊಮ್ಮಗೊಂಡೇಶ್ವರ ದೇವಾಲಯಮ, ತಾ॥ ಜಿ॥ ಬೀದರ.


ಬೀದರ ಕೋಟೆಯೊಳಗಿನ ಇರುವ ಬೊಮ್ಮಗೊಂಡೇಶ್ವರ ಕೆರೆ.

## ಅನುಬಂಧ - ೪

## ವಕ್ತಾರರ ಪಟ್ಟಿ

(೧) ಹೆಸರು : ಮಲಗೊಂಡ ಕಾರೆಮಿಂಗಿ
ಊರು : ಕೌಠಾ (ಬಿ)
ವಯಸ್ಸು : ಐವತ್ತೈದು
ಜಾತಿ : ಗೊಂಡ
ಶಿಕ್ಷಣ : ಅಶಿಕ್ಷಿತ
ಕಾಯಕ : ರೈತ
೨೫ನೇ ಡಿಸೆಂಬರ ೨೦೦೪

(೨) ಹೆಸರು : ನರಸಪ್ಪ ಇಸ್ಮಲಗೊಂಡ
ಊರು : ಬಕಚೌಡಿ
ವಯಸ್ಸು : ಅರವತ್ತು
ಜಾತಿ : ಗೊಂಡ
ಶಿಕ್ಷಣ : ಅಶಿಕ್ಷಿತ
ಕಾಯಕ : ಉನ್ನಿ ನೇಯ್ಗೆ
೧೦ನೇ ನವೆಂಬರ ೨೦೦೪

(೩) ಹೆಸರು : ನಾಗಪ್ಪ ಹುಗ್ಗೆ
ಊರು : ಚಾಳಕಾಪುರ ವಾಡಿ
ವಯಸ್ಸು : ಎಂಬತ್ತು
ಜಾತಿ : ಗೊಂಡ
ಶಿಕ್ಷಣ : ಅಶಿಕ್ಷಿತ
ಕಾಯಕ : ರೈತ
೧೦ನೇ ಜನವರಿ ೨೦೦೫

(೪) ಹೆಸರು : ಶಾಂತಲಿಂಗ ಸ್ವಾಮಿ
ಊರು : ಲಾಡಗೇರಿ, ಬೀದರ
ವಯಸ್ಸು : ಅರವತ್ತೆರಡು
ಜಾತಿ : ಸ್ವಾಮಿ (ಜಂಗಮ)
ಶಿಕ್ಷಣ : ೫ನೇ ತರಗತಿ
ಕಾಯಕ : ಜ್ಯೋತಿಷ, ಕೃಷಿ ಹಾಗೂ ಇತರ ಸ್ವಯಂ ಉದ್ಯೋಗ
೫ನೇ ಜನವರಿ, ೨೦೦೫

(೫) ಹೆಸರು : ಗುಂಡಮ್ಮ
ಊರು : ಶಹಗಂಜ, ಬೀದರ
ವಯಸ್ಸು : ಎಪ್ಪತ್ತೈದು
ಜಾತಿ : ಗೊಂಡ
ಶಿಕ್ಷಣ : ಅಶಿಕ್ಷಿತೆ
ಕಾಯಕ : ಗೃಹಿಣಿ
೧೫ನೇ ಫೆಬ್ರುವರಿ ೨೦೦೫

(೬) ಹೆಸರು : ಮಾಳಪ್ಪ ಅಡಸಾರೆ
ಊರು : ಏಕಲಾರ
ವಯಸ್ಸು : ಮೂವತ್ತೊಂದು
ಜಾತಿ : ಗೊಂಡ
ಶಿಕ್ಷಣ : ಬಿ.ಎ. ಎಲ್ ಎಲ್.ಬಿ.
ಕಾಯಕ : ಪತ್ರಕರ್ತರು
೮ನೇ ಜುಲೈ ೨೦೦೪

(೭) ಹೆಸರು : ಶರಣಪ್ಪ ಮೇತ್ರೆ
ಊರು : ಅಷ್ಟೂರ
ವಯಸ್ಸು : ನಲವತ್ತೈದು
ಜಾತಿ : ಕುರುಬ
ಶಿಕ್ಷಣ : ಅಶಿಕ್ಷಿತ
೧೯ನೇ ಜೂನ್ ೨೦೦೪

(೮) ಹೆಸರು : ದ್ರೌಪದಿ ಗಂಡ ಶಂಕರರಾವ ಡೊಮನೆ
ಊರು : ಅಷ್ಟೂರ
ವಯಸ್ಸು : ನಲವತ್ತು
ಜಾತಿ : ಕುರುಬ
ಶಿಕ್ಷಣ : ಅಶಿಕ್ಷಿತೆ
ಕಾಯಕ : ಗೃಹಿಣಿ
೧೯ನೇ ಜೂನ್ ೨೦೦೪

(೯) ಹೆಸರು : ಅಮೃತರಾವ ಚಿಮಕೋಡೆ
ಊರು : ಚಿಮಕೋಡ
ವಯಸ್ಸು : ನಲವತ್ತೆಂಟು
ಜಾತಿ : ಗೊಂಡ
ಶಿಕ್ಷಣ : ಎಂ.ಎ.
ಕಾಯಕ : ಬೀದರ ಜಿಲ್ಲಾ ಮಾಜಿ ಜೆ.ಡಿ. ಅಧ್ಯಕ್ಷರು
ಅಧ್ಯಕ್ಷರು ಬೊಮ್ಮಗೊಂಡೇಶ್ವರ ಶಿಕ್ಷಣ ಸಂಸ್ಥೆ, ಬೀದರ.
೨೦ನೇ ಆಗಸ್ಟ್ ೨೦೦೫

(೧೦) ಹೆಸರು : ಸಿದ್ದಯ್ಯ ಆಧುನಿಕ ಒಡೆಯರ
ಊರು : ಹುಮನಾಬಾದ
ವಯಸ್ಸು : ಐವತ್ತು
ಜಾತಿ : ಗೊಂಡ, ಕುರುಬ
ಶಿಕ್ಷಣ : ೩ನೇ ತರಗತಿ
ಕಾಯಕ : ಗೊಂಡ, ಕುರುಬರ ಧರ್ಮಗುರು
೧೫ನೇ ಜನವರಿ ೨೦೦೫

---

## ಅನುಬಂಧ - ೫

## ಆಕರ ಗ್ರಂಥಗಳು


(೧) ಗ್ರಂಥಗಳು :

(೧) 'ಸುಲ್ತಾನ ಸುರಳಿ' - ಡಾ|| ಕೆ. ಎಂ. ಮೈತ್ರಿ. ೧೯೯೪.

(೨) 'ಮಹಾತ್ಮ ಬೊಮ್ಮಗೊಂಡೇಶ್ವರನ ಪವಾಡಗಳು' - ಸಂ. ಮಾಳಪ್ಪ ಅಡಸಾರೆ. ೧೯೯೫.

(೩) 'ವೀರ ಸಂಗಯ್ಯನವರ ಭಜನೆ' ಶ್ರೀ ಶಾಂತ ಲಿಂಗ ಸ್ವಾಮಿ.

(೪) 'ಬೀದರ ಜಿಲ್ಲಾ ದರ್ಶನ' - ಸಂ. ಡಾ|| ಜಗನ್ನಾಥ ಹೆಬ್ಬಾಳೆ, ೧೯೯೨.

(೫) 'ಜೀಶಂಪರವರ ಜಾನಪದ ಬರಹಗಳು' - ಪ್ರೊ. ಕಾಳೇಗೌಡ ನಾಗವಾರ, ಅಂಬಳಿಕೆ ಹಿರಿಯಣ್ಣ, ೨೦೦೦.

(೬) 'ಕನ್ನಡ ಜಾನಪದ ಪ್ರಜ್ಞೆ' - ಡಾ|| ವೀರಣ್ಣ ದಂಡೆ, ೧೯೯೩.

(೭) 'ಜಾನಪದ ಅಧ್ಯಯನ' - ದೇ. ಜವರೆಗೌಡ, ೨೦೦೧.

(೮) 'ಹೈದರಾಬಾದ ಕರ್ನಾಟಕ ಜನಪದ ಸಾಹಿತ್ಯ' - ಡಾ|| ಬಸವರಾಜ ಪೊಲೀಸ್ ಪಾಟೀಲ್, ೨೦೦೧.

(೯) 'ಜಾನಪದ ಸಾಹಿತ್ಯ ದರ್ಶನ' - ಸಂ. ಎಸ್.ಎಮ್. ವೃಷಭೇಂದ್ರ ಸ್ವಾಮಿ, ೧೯೮೮.

(೧೦) 'ಕರ್ನಾಟಕ ಬುಡಕಟ್ಟುಗಳು' ಸಂಪುಟ ೧, ಪ್ರ.ಸಂ. ಡಾ|| ಎಚ್. ಲಕ್ಕಪ್ಪಗೌಡ, ೨೦೦೦.

(೧೧) 'ಜನ-ಜನಪದ-ಜಾನಪದ' - ಡಾ|| ಎಂ. ಚಿದಾನಂದ ಮೂರ್ತಿ, ೨೦೦೩.

(೧೨) 'ಬುಡಕಟ್ಟು ಕುಲಕಸುಬುಗಳು' - ಡಾ|| ಕೆ. ಎಂ. ಮೈತ್ರಿ., ೨೦೦೨.

(೧೩) 'ಸ್ಥಳೀಯ ಚರಿತ್ರೆ - ಅಧ್ಯಯನದ ತಾತ್ವಿಕತೆ ಮತತು ಸ್ವರೂಪ' ಪ್ರೊ. ಲಕ್ಷ್ಮಣ ತೆಲಗಾವಿ, ೨೦೦೩.

(೧೪) 'ಬೀದರ ಜಿಲ್ಲಾ ಸಾಂಸ್ಕೃತಿಕ ಅಧ್ಯಯನ' - ಬಸವರಾಜ ಸಬರದ, ೧೯೮೨.

(೧೫) 'ಮಹಮೂದ ಗವಾನ' - ಎಲ್. ಆರ್. ಕುಲಕರ್ಣಿ, ೧೯೬೯.

(೧೬) 'ಬೀದರ ಜಿಲ್ಲೆಯ ಜನಪದ ಕಥೆಗಳು' ಸಂ. ಕ್ಯಾಥನಹಳ್ಳಿ ರಾಮಣ್ಣ, ೧೯೭೬.

(೧೭) 'ಜಾನಪದ ಸೌರಭ' - ಡಾ|| ಬಿ.ಎಸ್. ಸ್ವಾಮಿ., ೧೯೯೩.

(೨) ಪತ್ರಿಕೆಗಳು :

(೧) 'ಕನಕ ಸ್ಫೂರ್ತಿ' ಮಾಸ ಪತ್ರಿಕೆ, ಸಂಪುಟ-೪, ನಾಲ್ಕನೆ ಸಂಚಿಕೆ, ೧೯೯೭.
ಸಂಪಾದನೆ : ಎಚ್.ಸಿ. ಶಿವಕುಮಾರ.

(೨) 'ಶರಣ ಸೌರಭ' ಸ್ಮರಣ ಸಂಚಿಕೆ, ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ, ೧೯೯೧.

(೩) ಧ್ವನಿ ಸುರಳಿ :

'ಬೊಮ್ಮಗೊಂಡೇಶ್ವರರ ಪವಾಡಗಳು'
ಸಾಹಿತ್ಯ - ಮಾಳಪ್ಪ ಅಡಸಾರೆ


---

